# ಹೊಂಬೆಳಕು



ನಾಗನಗೌಡರದ್ದು ರಾಜ ಮಹಾರಾಜರ ಅರಮನೆಯನ್ನು ಮೀರಿಸುವಂತಹ ಬೃಹದಾಕಾರದ ಬಂಗಲೆ. ಮನೆಯ ಒಳಗಡೆಯ ಕಂಪೌಂಡಿನಲ್ಲಿ ಅನೇಕ ತರಹದ ಮರ, ಗಿಡ, ಬಳ್ಳಿಗಳು, ವಿವಿಧ ದೇಶಗಳಿಂದ ತಂದ ಹೂವಿನ ಗಿಡಗಳು, ಸ್ವದೇಶಿ ಹೂವಿನ ಗಿಡಗಳು ಮನೆಯಲ್ಲಿ ಅನೇಕ ತರಹದ ಕಟ್ಟಿಗೆಯಿಂದ ಕೆತ್ತನೆಮಾಡಿದ ಅನೇಕ ಸಲಕರಣೆಗಳಿವೆ. ಸಿರಿತನಕ್ಕೆ ತಕ್ಕಂತೆ ಕಾರು, ಸ್ಕೂಟರ್‌ಗಳಿವೆ. ಅಲ್ಲದೆ ಗೌಡರು ದೇಸಾಯರ ಜೊತೆ ಸೇರಿಕೊಂಡು ಮಿಲ್ಲೊಂದನ್ನು ನಡೆಸುತ್ತಿದ್ದರು. ಕೇವಲ ಹತ್ತು ಸಾವಿರ ರುಪಾಯಿಗಳನ್ನು ಹಾಕಿ ಪ್ರಾರಂಭಿಸಿದ್ದ ಮಿಲ್ಲು ಈಗ ಬೆಳೆದು ಹತ್ತು ಕೋಟಿಯ ಬೆಲೆಯುಳ್ಳದ್ದಾಗಿದೆ. ಸುಮಾರು ಹತ್ತುವರ್ಷದಲ್ಲಿ ಇಷ್ಟೊಂದು ಬೆಳೆದು ಬರಲು ಅಲ್ಲಿ ಹಗಲಿರುಳು ದುಡಿಯುವ ಕಾರ್ಮಿಕವರ್ಗವೇ ಕಾರಣವೆಂದು ಬೇರೇನೂ ಹೇಳಬೇಕಾಗಿಲ್ಲ. ಈಗ ಈ ಮಿಲ್ಲು ತನ್ನ ಪ್ರತಿಷ್ಠೆಯನ್ನು ಸ್ವದೇಶದಲ್ಲಿ ಅಲ್ಲದೆ ಪರದೇಶದಲ್ಲಿಯೂ ಹಬ್ಬಿಸಿಕೊಂಡು ಬಂದು ಉನ್ನತ ಮಟ್ಟದ ಮಿಲ್ಲಾಗಿ ಜನರ ಪ್ರೀತಿಗೆ ಪಾತ್ರವಾಗಿದೆ. ಇಂತಹ ಮಿಲ್ಲಿಗೆ ದೇಸಾಯಿಯವರು ಹೆಸರಿಗೆ ಮಾತ್ರ ಪಾಲುದಾರರಿದ್ದು ಎಲ್ಲಾ ವ್ಯವಹಾರಗಳನ್ನು ನಾಗನಗೌಡರೇ ನೋಡಿಕೊಳ್ಳುತ್ತಿದ್ದರು.

— ೧ —




ನಾ... ಒಂದು ಕವರನ್ನು ಒಡೆದು ಆದರಲ್ಲಿಯ... ಓದಲು ಪ್ರಾರಂಭಿಸುವರು, ...ಶಾಂತಮ್ಮ ನೋಡುತ 'ಯಾರದ... ಗೋಪಾಲನದು ತಗೊ್ತ

ಓದಿ ಸಂತೋಷಪಡು' ಎಂದು ಆಕೆಯ ಮುಖಕ್ಕೆ ಎಸೆಯಲು ಅದ್ಯಾಕೆ ಹಾಗೆ ಎಸಿತೀರಾ ವಿಷಯ ಏನೂಂತ ಹೇಳ್ರಿ ಎಂದು ಕೆಳಗೆ ಬಿದ್ದ ಹಾಳೆಯನ್ನು ತೆಗೆದುಕೊಂಡು ನಿಲ್ಲುವಷ್ಟರಲ್ಲಿ ಕಮಲಾ ಬಂದು ಯಾರದು ಅಪ್ಪಾಜಿ ಪತ್ರ ಬಹುಶಃ ಗೋಪಾಲದು ಇರಬಹುದು ಅಲ್ಲವೇ ಎನ್ನಲು ಹೌದಮ್ಮ ಅವನದೇ ಅಲ್ಲಿದೆ ನೋಡು ಎಂದು ಶಾಂತಮ್ಮ ಪೇಪರನ್ನು ತೋರಿಸಿ ಹೇಳುವರು. ಕಮಲಾ ಪೇಪರನ್ನು ತೆಗೆದುಕೊಂಡು ಓದಿ ಸಂತೋಷದಿಂದ ಪೋಲಿಸ ಇಲಾಖೆಯಲ್ಲಿ ಬಹು ನಿಷ್ಠೆಯಿಂದ ಕೆಲಸಮಾಡಿ ಒಂದು ವರ್ಷದಲ್ಲಿ ಎರಡು ಬಹುದೊಡ್ಡ ದರೋಡೆಕೋರರ ಗುಂಪುಗಳನ್ನು ಹಿಡಿದು ಸರಕಾರಕ್ಕೆ ಸುಮಾರು ನಾಲ್ನೂರು ಕೋಟಿ ರುಪಾಯಿ ಲಾಭವನ್ನು ಮಾಡಿದ್ದಕ್ಕೆ, ಅಲ್ಲದೆ ಜನಸಾಮಾನ್ಯರು ಭಯ-ಭೀತಿಯಿಲ್ಲದೆ ಜೀವಿಸಲು ಅನುಕೂಲ ಮಾಡಿದ್ದಕ್ಕಾಗಿ ಸರಕಾರವು ಬಂಗಾರದ ಪದಕವನ್ನು ಕೊಟ್ಟು ಸನ್ಮಾನಿಸುವದು ಎಂದು ಬರೆದಿದ್ದಾನೆ. ಎಂದು ನುಡಿದಾಗ ನೋಡ್ರಿ ನಮ್ಮಗನಿಗೆ ಅವನಿಗೆ ಹಣದ ಬೆಲೆಯೇ ಗೊತ್ತಿಲ್ಲ. ನ್ಯಾಯ-ನೀತಿ, ಅಂಥಾ ಸಾಯಿತಾನೆ ಅಂತಾಹೇಳತಿದ್ರಿ, ಈಗ ನೋಡಿ ಜಯ ಇರೋದು ನ್ಯಾಯ-ನೀತಿಗೇನೆ. ಎಂದು ಶಾಂತಮ್ಮ ನುಡಿದಾಗ ಹೌದಮ್ಮ, ಗೋಪಣ್ಣ ನ್ಯಾಯದಿಂದ ದುಡಿದದ್ದಕ್ಕೆ ಫಲ ಸಿಕ್ಕಿರೋದು. ಅವನು ಹಣ-ಹಣ ಅಂತ ಅದರ ಹಿಂದಿಂದೆ ಹೋಗಿದ್ರೆ ಈ ಗೌರವದ ಪದಕ ಸಿಕ್ತಿರಲಿಲ್ಲ ! ಎಂದು ಕಮಲಾ ನುಡಿದಾಗ ಒಳಗಿನಿಂದ ದೀಪಕ್ ಎದ್ದು ಬರುತ್ತ ಯಾರಿಗಮ್ಮ ಗೌರವದ ಫಲಕ ಎಂದು ನುಡಿದಾಗ ನಿನಗೆ ಕಣೋ ರಸ್ತೆಲಿ ಉಂಡಾಡಿ ಗುಂಡನ ಹಾಗೆ ಹುಡುಗಿಯರ ಹಿಂದೆ ತಿರುಗಿ ಬಯ್ಯಿಸಿಕೊಂಡು ಬರತೀಯಲ್ಲ ಅದಕ್ಕೆ ಎಂದು ಕಮಲಾ ನುಡಿದಾಗ ನಿನಗೆ ಸಾವಿರ ಸಲ ಹೇಳಿದಿನಿ ನನ್ನ ವಿಷಯಾನ ಮಾತನಾಡಬೇಡ ಅಂತಾ ಇದೇ ಕೊನೆ ಇನ್ನೊಂದು ಸಲ ಏನಾದರೂ ನನ್ನ ಬಗ್ಗೆ ಮಾತಾಡಿದೆ ಅಂದ್ರೆ ನಾನು ಸುಮ್ಮನಿರಲ್ಲ. ಜುಜುಬಿ ಒಂದೆರಡು ತೊಲ ಬಂಗಾರದ ಪದಕ ತಗೋಬೇಕಾದರೆ ಇಷ್ಟೊಂದು ತೊಂದರೆ ತಗೋಬೇಕಾ. ಈತ ಹೂಂ ಅಂದಿದ್ರೆ ಈತನ ತೂಕ ಬಂಗಾರ ಕೊಡಲಿಕ್ಕೆ ತಯಾರಾಗಿದ್ರು ಅದನ್ನೆಲ್ಲ ಬಿಟ್ಟು ಪ್ರಶಸ್ತಿ ತಗೋಳಾಕ ಹೊರಟಿದಾನೆ ಭೂಪ ಎಂದು

ದೀಪಕ ನುಡಿದಾಗ ಅದ್ಹೇಗೋ ದೀಪಕ ಎಂದು ಗೌಡರು ಕೇಳಲು
ಈ ವಿಷಯಾನ ನಾನು ಹೇಳತೀನಿ ಎನ್ನುತ್ತ ದೇಸಾಯವರು ಒಳಗೆ
ಪ್ರವೇಶಿಸುವರು. ಆಗ ಶಾಂತಮ್ಮ ಮತ್ತು ಕಮಲಾ ಒಳಗೆ ಹೋಗು
ವರು. ಆ ಗುಂಪಿನಲ್ಲಿ ಕುಮಾರಗೌಡರ ಪೈಕಿ ನಾಲ್ಕಾರು ಜನ ಇದ್ದ
ರಂತೆ ಅವರೇ ಹೇಳಿದ್ದು ಈಗ ಸಿಕ್ಕಿರುವ ಒಂದು ಟನ್ ಬಂಗಾರದಲ್ಲಿ
ನೀನರ್ಧ ತಗೋ ನಮಗರ್ಧ ಇರಲಿ ಎಂದಾಗ ಗೋಪಾಲ ಒಪ್ಪದಿದ್ದಾಗ
ಮತ್ತೇ ಅವರು ಪೂರ್ತಿ ಬಂಗಾರವನ್ನು ನೀನೇ ತಗೇದುಕೋ ನಮ್ಮನ್ನು
ಮಾತ್ರ ಕೈಬಿಡು ಎಂದು ಎಷ್ಟೂ ಹೇಳಿದರೂ ಕೇಳದೇ ಜೈಲಿಗೆ ಹಾಕಿ
ದರಂತೆ. ಈತನಿಂದ ನಮಗೆ ಸಹಾಯವಾಗಬಹುದೆಂದು ತಿಳಿದು ಈತನನ್ನು
ಈ ಇಲಾಖೆಗೆ ಸೇರಿಸಿದರೆ ಈತನ ರೀತಿನೇ ಬೇರೆಯಾಯ್ತು ಎಂದು
ದೇಸಾಯಿಯವರು ನುಡಿಯಲು, ಈತ ನಮಗೆ ಮಗನಾಗಿ ಹುಟ್ಟಲಿಲ್ಲ
ವೈರಿಯಾಗಿ ಹುಟ್ಟಿದನೆಂದು ಗೌಡರು ನುಡಿದಾಗ ನಮ್ಮ ಕಾಮೇಶ
ನೋಡ್ರಿ ಈಗ ನಮ್ಮನ್ನೇ ಮೀರಸ್ತಾನ ಅವನ ವ್ಯವಹಾರಂದ್ರ ಬಹಳ
ವಿಚಿತ್ರ ಯಾವ ತರಹದ ಬಂಡವಾಳವಿಲ್ಲದೇನೆ ಮನಿಗೆ ಹತ್ತುಸಾವಿರ
ರುಪಾಯಿ ಬಂದು ಬೀಳತದ, ಎಂದು ದೇಸಾಯಿ ನುಡಿದಾಗ
ಹೌದು ಅಪ್ಪಾಜಿ ಆ ವ್ಯವಹಾರದಲ್ಲಿ ನಾನೂ ಪಾಲದಾರನೀದ್ದೀನಿ
ಈರ್ವರೂ ಸೇರಿಯೇ ಈ ವ್ಯವಹಾರ ಮಾಡುತ್ತಿರುವೆವು. ನಾವು ಕಲಿಯು
ತ್ತಿರುವಾಗಲೇ ವ್ಯವಹಾರದ ಮಾರ್ಗವನ್ನು ಹಿಡಿದಿದ್ದೀವಿ. ಅವನಿಗೂ ಅಷ್ಟೆ
ಈ ವ್ಯವಹಾರ ಗೊತ್ತಿದ್ದರೆ ಮಾಡುತ್ತಿದ್ದ ಅವನಿಗೆ ಹಣವನ್ನು
ಗಳಿಸುವುದು ಗೊತ್ತೇಯಿಲ್ಲ ಅವನಿಗೆ ಸುಮ್ಮನೆ ನೌಕರಿ ಬಿಟ್ಟು
ಬರಲು ಹೇಳಿ ಅಪ್ಪಾಜಿ ಎಂದು ದೀಪಕ ನುಡಿಯಲು ಹಾಗೇಮಾಡಿದರೆ
ನಾವೆಲ್ಲ ಆರಾಮದಿಂದ ಬದುಕಬಹುದಯ್ಯ ದೀಪಕ ಎನ್ನುತ್ತ
ರೇವಣ್ಣ ಹಾಗೂ ಕುಮಾರ ಗೌಡರು ಪ್ರವೇಶಿಸುವರು.
ಬನ್ನಿ ಕುಮಾರಗೌಡರೇ ಏನ ಸಮಾಚಾರ ಎಂದು ನಾಗನಗೌಡರು
ಕೇಳಲು ನಿನ್ನೆ ರೇವಣ್ಣನ ಅಳಿಯಂದಿರು ಏನೂ ದುಡುಕಿ ಒಂದು ಕೆಟ್ಟ
ಕೆಲಸ ಮಾಡಿಬಿಟ್ಟಿದಾರ ಅವರನ್ನ ಗೋಪಾಲ ಹಿಡಿದಿದ್ದಾನೆಂತ ಆತ ಎಷ್ಟು
ಹೇಳಿದರೂ ಬಿಟ್ಟಿಲ್ಲ. ಅದಕ್ಕ ನಿಮ್ಮ ಹತ್ತಿರ ಓಡಿ ಬಂದಿವಿ ಎಂದು

ಕುಮಾರಗೌಡರು ಹೇಳಲು ಹೌದು ಈಗ ನನಗೇನು ಮಾಡಂತೀರಿ ಎಂದು ನಾಗನಗೌಡರು ನುಡಿದಾಗ ಅವರಿಗೆ ಸ್ವಲ್ಪ ಫೋನ್‌ಮಾಡಿ ಹೇಳಿನೋಡಿ ಬಿಟ್ಟರೇ ಸರಿ ಇಲ್ಲವಿದ್ದರೆ ಮಂತ್ರಿಗಳಿಗಂತೂ ತಿಳಿಸಲೇಬೇಕೆಂದು ರೇವಣ್ಣ ನುಡಿದಾಗ ಅಪ್ಪಾಜಿ ಗೋಪಾಲನಿಗೆ ಫೋನು ಮಾಡುವದಕ್ಕಿಂತ ಮಂತ್ರಿಗಳಿಗೆ ಮಾಡುವುದು ಉತ್ತಮ ಎಂದು ದೀಪಕ ನುಡಿದಾಗ ತಡಿರಿ ಸ್ವಲ್ಪ ಪ್ರಯತ್ನಮಾಡಿನೋಡೋಣ ಎಂದು ಗೌಡರು ಫೋನು ಮಾಡುವರು. ಆಗ ಗೋಪಾಲನು ದಯವಿಟ್ಟು ಇಂಥಹ ವಿಚಾರದಲ್ಲಿ ತಾವು ಮತ್ತೆಂದಾದರೂ ಬಾಯಿಹಾಕಬಾರದೆಂದು ಕಡಾಕಂಡಿತನಾಗಿ ಹೇಳಿದನು. ತಪ್ಪುಮಾಡಿದವರಿಗೆ ಸರಿಯಾದ ಶಿಕ್ಷೆಯಾಗದೇ ಹೋದರೆ ಅವರು ಹಾದಿಗೆ ಬರುವುದಿಲ್ಲ ಇವರೇ ಮುಂದೆ ರಂಗಾ-ಬಿಲ್ಲಾರಂಥಹ ಮಹಾನ್ ದರೋಡೆಕೋರರನ್ನು ನಿರ್ಮಾಣಿಸಲೂಬಹುದು. ಅವರಿಗೆ ತಕ್ಕಶಿಕ್ಷೆಯಾಗಬೇಕು ಎಂದು ವೇದಾಂತ ವನ್ನು ಹೇಳಿದಾಗ ಗೌಡರು ಫೋನನ್ನು ಇಟ್ಟುಬಿಟ್ಟರು. ಗೌಡರ ರೌದ್ರಾವತಾರವನ್ನು ಕಂಡು ಎಲ್ಲರೂ ವಿಷಯ ತಿಳಿದು ಮಂತ್ರಿಗಳಿಗೆ ಫೋನ್ ಮಾಡಿದರು. ಮಂತ್ರಿಗಳಿಗೆ ಅಭಯಹಸ್ತವನ್ನು ನೀಡಿದಾಗ ಅವರು ಒಪ್ಪಿಕೊಂಡರು. ರೇವಣ್ಣ ಗೌಡರು ಹೇಳಿದ ಪ್ರಕಾರ ನಾಳೆ ಅವರನ್ನು ಹಾಗೂ ಪೋಲಿಸ್‌ಅಧಿಕಾರಿಗಳನ್ನು ಕರೆದು ಒಂದು ಪಾರ್ಟಿಮಾಡಿ ವ್ಯವಹಾರ ಬಗೆಹರಿಸಿಕೊಳ್ಳಬೇಕು. ಅವರಿಗೆ ಕೊಡಬೇಕಾದ ಹಣ ಮತ್ತು ಪಾರ್ಟಿಯ ಹಣವನ್ನು ಗೌಡರಿಗೆ ಒಪ್ಪಿಸಿಬಿಡು ಎನ್ನಲು ರೇವಣ್ಣ ಜೇಬಿನಲ್ಲಿಯ ಹಣವನ್ನು ಕೊಡುವನು. ಆಗ ನಾಗನಗೌಡರು ಕರೀಮ್ ಸಾಹೇಬ ಈ ಹಿಂದಿಂದ ಮಾಮೂಲ ಪಾರ್ಟಿಗಿಂತ ಜೋರಾಗಿರಬೇಕು. ಎಲುಬು, ಬಾಟಲಿ, ಹಾರಾಟ ಜೋರಾಗಿರಬೇಕು ಎಂದು ಹೇಳುತ್ತ ಸ್ವಲ್ಪ ಹಣವನ್ನು ಕೊಡುವರು. 'ನಾಳೆ ಸಾಯಂಕಾಲ' ಎಂದು ಎಲ್ಲರೂ ಹೇಳಿ ತಮ್ಮ ತಮ್ಮ ಮನೆಗೆ ಹೋದರು.

— ೩ —

ನಗರದಿಂದ ಒಂದೆರಡು ಕೀಲೋಮೀಟರ ಅಂತರದಲ್ಲಿ ಇರುವಂತಹ ಈ ಉಧ್ಯಾನವನ ಮಧ್ಯದ ಹಾದಿಯಲ್ಲಿ ಹೊಲಗದ್ದೆಗಳಿದ್ದು,

ಒಂದಕ್ಕಿಂತ ಮತ್ತೊಂದು ನೋಡಲು ಬಲು ಆಕರ್ಷಣೀಯವಾಗಿದ್ದವು ಹಾದಿಯುದ್ದಕ್ಕು ಬೆಳೆದ ಬೆಳೆಗಳ ಸಿರಿಯನ್ನು ನೋಡುತಾ, ಅಲ್ಲಿ ನೋಡು ಮಧು ಸೂರ್ಯನು ಮುಳುಗುವಾಗಿನ ದೃಶ್ಯ ಎಷ್ಟೊಂದು ಮನೋಹರವಾಗಿದೆ ಸೂರ್ಯ ಮುಳುಗುವ ಭಾಗದ ಆಕಾಶವು ಬಂಗಾರವರ್ಣದಿಂದ ಕೂಡಿ ನೋಡಲು ಎಷ್ಟೊಂದು ಅಲ್ಹಾದಕರವಾಗಿ ಕಾಣುವುದಿಲ್ಲವೆ ! ಹೌದು ರಾಮು ಹಕ್ಕಿ-ಪಕ್ಷಿಗಳು ಚಿಲಿ-ಪಿಲಿ ನಾದ ವನ್ನು ಮಾಡುತ್ತ ತಮ್ಮ ತಮ್ಮ ಗೂಡನ್ನು ಸೇರುತ್ತಲಿವೆ. ಆ ಗಿಡ ಮರಗಳ ಮೇಲೆ ಬಿದ್ದಿರುವ ಕಿರಣಗಳನ್ನು ನೋಡು ಆ ಮರಗಳಿಗೆ ಬಂಗಾರದ ಲೇಪನವನ್ನು ಕೊಟ್ಟಂತೆ ಕಾಣುದು. ನಾನಾತರಹದ ಹೂವಿನ ಮೇಲೆ ಕಿರಣಗಳು ಬಿದ್ದು ಅವುಗಳ ಬಣ್ಣವೇ ಬೇರೆ ಯಾಗಿದ್ದು ನೋಡಲು ಬಹು ಸುಂದರವಾಗಿ ಕಾಣಿಸುವವಲ್ಲವೆ. ಹೌದು ಮಧು ಕೆಲವೊಂದು ಹೂಗಳು ಅರಳುವ ಸಮಯವಲ್ಲವೆ ನೋಡು ಹೂಗಳ ವಾಸನೆಯು ಬರುವದಲ್ಲವೆ. ಹೊಸದಾಗಿ ಮದುವೆಮಾಡಿಕೊಂಡ ವರು, ಪ್ರೇಮಿಗಳು ಸಂಧಿಸುವ ಈ ಸಮಯ, ಆ ಪ್ರೇಮಿಗಳಿಗೆ ಸ್ವಾಗತ ವನ್ನು ಕೋರಿ ಅವರ ಬಾಳೂ ಸಹ ಮಧುರವಾಗಿ ಹರಡಲಿ ಎಂದು ಒಳಿತನ್ನು ಬಯಸಲು ಅರಳಿದ ಹೂಗಳಿವು. ಇಂಥಹ ಒಳ್ಳೆಯ ಬುದ್ಧಿ ಮಾನವರಾದ ನಮಗಿಲ್ಲ. ಮಾನವ ಅತೀ ಬುದ್ಧಿವಂತ ಸಕಲ ಪ್ರಾಣಿಗಳಲ್ಲಿ ಶ್ರೇಷ್ಠವಾದ ಪ್ರಾಣಿ ಈ ಮಾನವ ಆದರೆ ಆತನಷ್ಟು ಹೀನವಾದ ಬುದ್ಧಿಮಾತ್ರ ಯಾವ ಪ್ರಾಣಿಗಳಲ್ಲಿಯೂ ಇಲ್ಲವೆಂದರೆ ತಪ್ಪೇನಾಗಲಾರದು, ಅಲ್ಲವೇ ಮಧು. ಹೌದು ರಾಮು ಮಾನವ ತನ್ನತನವನ್ನೆ ಮರೆತು ತಾನೊಬ್ಬ ಪಶುವಿನಂತೆ ವರ್ತಿಸುತ್ತಿರುವನು. ಹೀಗೆಯೇ ಮಾತನಾಡುತ್ತ ತಮ್ಮ ಮಾಮೂಲಿ ಸ್ಥಳಕ್ಕೆ ಬರುವರು. ಅಷ್ಟರಲ್ಲಿ ಒಬ್ಬ ಹುಡುಗ ಬಂದು ಸರ್ ನನಗೆ ಈ ಲೆಕ್ಕ ಬರುತ್ತಿಯಿಲ್ಲ ಸರ ಎಂದು ಮಧುಕರನ ಮುಂದೆ ಪುಸ್ತಕ ವನ್ನು ಹಿಡಿದಾಗ ಮಧುಕರನು ಅದನ್ನು ಓದಿ ಬಿಡಿಸಿ ಹೇಳುವನು ಆಗ ಹುಡುಗ ಮರಳಿ ಹೋಗಲು ಯಾವ ಊರಪ್ಪ ನಿನ್ನದು ತಂದೆ ತಾಯಿಗಳು ಇದ್ದಾರಾ ಎನ್ನಲು ನನ್ನದು ಇದೇ ಊರು ಸರ್ ತಂದೆತಾಯಿಗಳನ್ನು ನಾನು ನೋಡಿಯೆ, ಇಲ್ಲ. ನಮ್ಮಜ್ಜಿ ಹತ್ತಿರ ನಾನು

ಇದ್ದೀನಿ ಸರ್ ಎಂದು ಹುಡುಗ ನುಡಿದಾಗ ನಿಮ್ಮಜ್ಜಿ ಏನು ಕೆಲಸ ಮಾಡುತ್ತೆ ಎಂದು ರಾಮು ಕೇಳಲು ಬೆಳಿಗ್ಗೆ ಹೊಲದ ಕೆಲಸ ಮಾಡಿ ಬರುತ್ತೆ ಸರ್ ಸಾಯಂಕಾಲ ಯಾರದೋ ಮನೆಯಲ್ಲಿ ಮನೆಗೆಲಸ ಮಾಡುತ್ತೆ. ನಾನು ಬೆಳಿಗ್ಗೆ ದಿನಪತ್ರಿಕೆ ಗಳನ್ನು ಹಂಚಿ ನಂತರ ಶಾಲೆಗೆ ಹೋಗುತೀನಿ ಸರ್ ಎಂದು ಹುಡುಗ ನುಡಿದಾಗ ಮಧುಗೆ ಬಹು ಸಂಕಟವಾಯಿತು. ನಿನಗೇನಾದರೂ ತೊಂದರೆ ಯಾದರೆ ಬಂದು ನಮ್ಮನ್ನು ಕಾಣಪ್ಪ ಯಾವುದಕ್ಕೂ ಶಾಲೆಯನ್ನು ತಪ್ಪಿಸಬಾರದು ಎಂದು ಮಧುಕರ ನುಡಿದಾಗ ಸರಿ ಸರ್ ನಾನಿನ್ನು ಬರತೀನಿ ಸರ್ ಎನ್ನುತ್ತ ಹೊರಟುಹೋದನು. ನೋಡು ರಾಮುನು ಹೆಚ್ಚು ಕಡಿಮೆ ಈತ ನನ್ನ ಕುಲದವನೇ, ನನಗೆ ಸೋದರಮಾವನ ಆಸರೆ ಸಿಕ್ಕಿದೆಂತ ಹೀಗಿದ್ದೀನಿ ಅವರು ಇರದಿದ್ದರೆ ಹೇಗಿರುತ್ತಿದ್ದೆನೋ ? ಎಂದು ದೊಡ್ಡ ಉಸಿರನ್ನು ಬಿಡುವನು. ಹೌದು ಮಧು ಅದೆಲ್ಲವೂ ಅವರವರು ಪಡೆದು ಬಂದಭಾಗ್ಯವೆಂದೇ ಹೇಳಬಹುದು. ಅಂದಹಾಗೆ ಮಧು ನಿಮ್ಮ ತಂದೆಗೆ ಪರಿಹಾರವೇನನ್ನೂ ಕೊಡಲಿಲ್ಲವೆ, ಎನ್ನಲು ಇಲ್ಲ ರಾಮು ನಮ್ಮ ಸೋದರಮಾವ ಕೇಳಲಿಲ್ಲ ನಿಮ್ಮ ಊರಿನ ಆಸ್ತಿ ಪಾಸ್ತಿಗಳನ್ನು ಮಾರಿದರೂ ನನ್ನ ಭಾವನಷ್ಟು ಬೆಲೆ ಬಾಳುವುದಿಲ್ಲ. ನ್ಯಾಯ, ನೀತಿ, ಧರ್ಮದಿಂದ ಬಾಳುವ ಒಬ್ಬ ಮನುಷ್ಯನಿಗೆ ಬದುಕಿಸ ಲಾರದ ನಿಮ್ಮಂಥ ಅಧರ್ಮಿಗಳ ಸಹಾಯ ನನಗೆ ಬೇಕಾಗಿಲ್ಲ ಕೇಳು ನಾಗನಗೌಡರೇ ಒಂದು ತಿಂಗಳು ತುಂಬುವುದರೊಳಗಾಗಿ ನನ್ನ ಭಾವ ಮಾಡಿದ ಸಾಲವನ್ನು ತಂದುಕೊಡುವೆನು ನಿಮ್ಮಂಥಹ ನೀಚರ ಋಣ ದಲ್ಲಿರಬಾರದು ಎಂದು ನುಡಿದು ಎರಡುವಾರದಲ್ಲಿಯೇ ಹಣವನ್ನು ಸಂಗಪ್ಪಮಾಸ್ತರರನ್ನು ಕರೆದುಕೊಂಡುಹೋಗಿ ಕೊಟ್ಟರು. ಎನ್ನಲು ಹೌದು ಮಧು ನಿಮ್ಮ ತಂದೆ ಅಷ್ಟೊಂದು ಸಾಲವನ್ನು ಏಕೆ ಮಾಡಿ ದರು ಎನ್ನಲು ನಮ್ಮ ಅಜ್ಜಿಗೆ ಯಾವುದೋ ಕಾಯಿಲೆಯಿತ್ತಂತೆ ಅದರ ಸಲುವಾಗಿ ಗೌಡರ ಹತ್ತಿರ ಸಾವಿರ ರೂಪಾಯಿ ಸಾಲ ವನ್ನು ತಂದರಂತೆ ಅವನ್ನು ಸ್ವಲ್ಪ ದಿನಗಳಾದ ನಂತರ ಮರಳಿಸಿದರಂತೆ ಆಗ ಗೌಡರು ಕಾಗದವನ್ನು ಕೊಡಲಿಲ್ಲವಂತೆ ಹೋಗಿಕೇಳಿದಾಗ ನಾಳೆ

ಬಾ ಸಾಡದ್ದು ಬಾಯೆಂದು ಹೇಳುತ್ತ ನಡೆದರಂತೆ. ಸ್ವಲ್ಪೇ ದಿನಗಳ ನಂತರ ನಮ್ಮಜ್ಜಿ ತೀರಿಹೋದರಂತೆ ಮತ್ತೇ ಸ್ವಲ್ಪ ಹಣವನ್ನು ತಂದ ರಂತೆ ಆಗಲೂ ಸಹ ಹೊಲದ ಬೆಳೆಯು ಬಂದನಂತರ ಬೆಳೆಯನ್ನು ಮಾರಿ ಸಾಲವನ್ನು ತೀರಿಸಿದರಂತೆ ಆಗಲೂ ಸಹ ಕಾಗದವನ್ನು ಕೊಡಲಿಲ್ಲ. ನಂತರ ಸಂಗಪ್ಪ ಮಾಸ್ತರರನ್ನು ಕರೆದುಕೊಂಡುಹೋಗಿ ಕೇಳಿದಾಗ ನಮ್ಮ ತಂದೆಯ ಹೆಸರಿನಲ್ಲಿ ಹತ್ತು ಸಾವಿರದ್ದು ಒಂದು ನಂತರ ಐದು ಸಾವಿರದ್ದು ಒಂದು ಹೀಗೆ ಎರಡು ಪತ್ರಗಳಿದ್ದುವಂತೆ ಇದಕ್ಕೆ ಬಡ್ಡಿ ಐದು ಸಾವಿರ ಒಟ್ಟು ಇಪ್ಪತ್ತು ಸಾವಿರವೆಂಬ ಸುದ್ದಿಯನ್ನು ಕೇಳಿದಾಗ ನಮ್ಮ ತಂದೆಗೆ ಕೋಪಬಂದು ಅವರನ್ನು ಹೊಡೆಯಲು ಹೋದಾಗ ಅಲ್ಲಿದ್ದ ಜನರು ಬಿಡಿಸಿದರಂತೆ ತನಗಾದ ಈ ಅನ್ಯಾಯವನ್ನು ಗೌಡರ ಹತ್ತಿರ ವ್ಯವಹರಿಸುವ ಎಲ್ಲರಿಗೂ ಹೇಳಿ ಗೌಡರ ಮರ್ಯಾದೆಯನ್ನು ತೆಗೆಯಲು ಪ್ರಾರಂಭಿಸಿದರು. ಹೀಗಾಗಿ ಕಾಮಧೇನುವಿನಂತಹ ಮನುಷ್ಯನಿಗೆ ಅನ್ಯಾಯವನ್ನು ಮಾಡಿದ ನಾಗ ನಗೌಡರಿಗೆ ವ್ಯವಹಾರದಿಂದ ದೂರವಿರಿಸಿದರು. ಇದನ್ನು ಮುಂದೆ ಬೆಳಯಿಸಿಕೊಡಬಾರದೆಂದು ತಿಳಿದು ನಗರದ ಮತ್ತಷ್ಟು ಪ್ರಮುಖರನ್ನು ತನ್ನ ಬಲೆಯಲ್ಲಿ ಹಾಕಿಕೊಂಡನು. ಅವರೆಲ್ಲ ಗೌಡರ ಮಾತನ್ನು ವಿಚಾರಿ ನಡೆಯುದ ಹಾಗೆ ಮಾಡಿ ಸಮಯವನ್ನು ಸಾಧಿಸಿಕೊಂಡು ನಮ್ಮ ತಂದೆ ಹೊಲಕ್ಕೆ ಹೋಗುತ್ತಿರುವಾಗ ಆತನ ಮೇಲೆ ಕಾರನ್ನು ಹಾಯಿಸಿದರು ಸ್ಥಳದಲ್ಲಿ ನಮ್ಮ ತಂದೆ ಸತ್ತರು. ಸುದ್ಧಿಯನ್ನು ತಿಳಿದ ನನ್ನ ತಾಯಿ ಹೃದಯಾಘಾತದಿಂದ ಅಸುನೀಗಿದರು. ನಮ್ಮ ತಂದೆಯ ಬಗ್ಗೆ ಕಾನೂನಿನ ಮೊರೆಹೊಕ್ಕಾಗ ಆ ಸಮಯದಲ್ಲಿ ಗೌಡರು ನಗರದ ಪ್ರಮುಖರನ್ನು ಕರೆದುಕೊಂಡು ಮಂತ್ರಿಗಳ ಹತ್ತಿರ ನಗರದ ವಿಷಯ ವನ್ನು ಚರ್ಚಿಸುವ ಸಲುವಾಗಿ ರಾಜಧಾನಿಗೆ ಹೋಗಿದ್ದರು ಎಂದು ತೀರ್ಮಾನವಾಯ್ತು. ಸ್ವತಃ ಗೌಡರೇ ನನ್ನ ತಂದೆಯ ಮೇಲೆ ಕಾರನ್ನು ಹಾಯಿಸಿದ್ದನ್ನು ಸಾಕ್ಷಿಗಳು ಹೇಳಿದರೂ ಅಲ್ಲಿ ಸತ್ಯ ಸತ್ತುಬಿದ್ದಿತು. ಸರಕಾರಿ ಸಾಕ್ಷಿಗಳು ಸುಳ್ಳು ಇದ್ದರೂ ಸತ್ಯವಾ- ಯಿತು. ಕಾರನ್ನು ಹಾಯಿಸಿದವನು ನಾಗನಗೌಡರಲ್ಲ ಬೇರೆ ಯಾರೋ

ಇರಬಹುದು ಎಂದು ಹೇಳಿತು. ಆ ವ್ಯಕ್ತಿಯ ಮೇಲೆ ಕಾರು ಹಾಯಿಸಿದವರನ್ನು ಪೋಲಿಸರು ಬಲು ಜಾಣ್ಮೆಯಿಂದ ಅಷ್ಟೇ ಶೀಘ್ರ ದಲ್ಲಿ ಹುಡುಕುವರೆಂದು ಪೇಪರದಲ್ಲಿ ಬಂದಿತು, ಸುಮಾರು ಹದಿನಾರು ವರ್ಷವಾಯ್ತು ಇನ್ನೂ ನಡೀತಾನೇ ಇದೆ ಎಂದು ವ್ಯಂಗ್ಯವಾಗಿ ಮಧುಕರ ನುಡಿದಾಗ ಕೋಪದಿಂದ ಇದು ಬಲು ಅನ್ಯಾಯ ಮಧು ಈ ಅನ್ಯಾಯದ ಸೇಡನ್ನು ಹೇಗಾದರೂ ಮಾಡಿ ತೀರಿಸಿಕೊಳ್ಳಲೇಬೇಕು. ಈ ತರಹದ ಭಾವನೆ ನಿನಗೆ ಬರುವದಿಲ್ಲವೇ, ಮಧು ಎಂದು ರಾಮು ಕೇಳಿದಾಗ ಮಧು ದೊಡ್ಡದಾದ ನಿಟ್ಟುಸಿರನ್ನು ಬಿಡುತ್ತ. ಸೇಡು ಯಾರ ಮೇಲೆ ಸೇಡು ರಾಮು. ಗೌಡರ ಮೇಲಾ ಅಥವಾ ಕಾನೂನಿನ ಮೇಲಾ ? ಅಥವಾ ಅವರೇ ದೇವರೆಂದು ತಿಳಿದ ಈ ಸಮಾಜದ ಮೇಲಾ ? ಹೇಳು ರಾಮು ಹೇಳು ಯಾರ ಮೇಲೆ ತೀರಿಸಿ ಕೊಳ್ಳಬೇಕು.

ಇಂಥಹ ಅನ್ಯಾಯದಿಂದ ಬಳಲುತ್ತಿರುವ ನನ್ನಂಥಹ ಅದೆಷ್ಟು ಜನರಿದ್ದಾರೆ ಅವರೆಲ್ಲ ನನ್ನನ್ನು ಅನುಸರಿಸುವರೇ ಎಂದು ಮಧು ಉದ್ವೇಗದಿಂದ ನುಡಿದಾಗ ಯಾಕೆ ಸಾಧ್ಯವಿಲ್ಲ ಮಧುಕರ ! ಪ್ರತಿ ಯೊಬ್ಬರನ್ನು ಸಮಯ ಸಾಧಿಸಿಕೊಂಡು ಮುಗಿಸಿಬಿಡಬೇಕು ಎಂದು ಕೋಪದಿಂದ ರಾಮು ನುಡಿದಾಗ ಆ ಕೆಲಸ ಅಷ್ಟೊಂದು ಸುಲಭವಲ್ಲ ರಾಮು, ಅವರು ಒಬ್ಬೊಬ್ಬರೆ ತಿರುಗುವವರಲ್ಲ ಮೇಲಾಗಿ ಅವರ ಮನೆಯ ಮುಂದೆ ಒಂದೆರಡುಸಲ ಸುಳಿದಾಡಿದರೆ ಸಾಕು ಅವರ ಗುಂಡಾಗಳಿಂದ ನಮ್ಮ ಕುಲಗೋತ್ರನನ್ನು ವಿಚಾರಿಸಿಕೊಂಡು ಸಾಧ್ಯ ವಾದರೆ ನಮ್ಮನ್ನು ಕೊನೆಗಾಣಿಸಿ ಬಿಡುವರು. ಪರಿಸ್ಥಿತಿ ಹೀಗೆ ಇರುವಾಗ ಅವರ ತಂಟೆಗೆ ಹೋಗದೆ ಇರುವುದು ಒಳ್ಳೆಯದು ಎಂದು ಮಧು ನುಡಿದಾಗ ಅಷ್ಟೇಗೆ ಸಾಧ್ಯ ಮಧು ನಮ್ಮ ಕಣ್ಣೆದುರಿಗೆ ಆಗುತ್ತಿದ್ದ ಅನ್ಯಾಯವನ್ನು ಕಂಡು ಸುಮ್ಮನಿರಬೇಕೇ ಎಂದು ರಾಮು ಕೋಪದಿಂದ ಕೇಳಲು ಸುಮ್ಮನಿರಬಾರದು ರಾಮು ಅವರಿಂದ ತೊಂದರೆಗೊಳಗಾದವರನ್ನು ಮಾತ್ರ ಒಂದುಗೂಡಿಸಿದರೆ ಅವರ ವಿರೋಧವಾಗಿ ಒಂದು ಬಲಿಷ್ಟವಾದ ಯಾವುದೇ ತೊಂದರೆಯನ್ನು

ಅನುಭವಿಸಲೂ ಸಿದ್ಧವಿರತಕ್ಕ ಒಂದು ಗುಂಪನ್ನು ನಾವು ತಯಾರಿಸಬೇಕು. ಜನಸಾಮಾನ್ಯರಿಗೆ ಅವರಿಂದ ಆಗುವ ತೊಂದರೆಗಳನ್ನು ಹೇಳಬೇಕು. ಜನರ ಮನಸ್ಸನ್ನು ತಿದ್ದಿ ಸತ್ಯದ ಹಾದಿಯಲ್ಲಿ ನಡೆಯುವ ರೀತಿಯನ್ನು ಹೇಳಬೇಕು. ಮಾನವರೆಲ್ಲರೂ ಸರಿಸಮಾನರು ಮೇಲು-ಕೀಳು ಭಾವನೆ ಬರಬಾರದು, ಬಡವರಾದರೂ ಸರಿ ಅವ-ರಿಗೂ ಅತ್ಮಾಭಿಮಾನವಿವೆ ಎಂಬು ಜನರನ್ನು ಎಚ್ಚರಿಸಬೇಕು· ಎಂದು ನುಡಿದಾಗ.......... ಅದು ಅಷ್ಟೊಂದು ಸುಲಭವಾದ ಮಾರ್ಗವಲ್ಲ ಮಧು ಸಾವಿರಾರು ವರ್ಷಗಳಿಂದ ಅವರಲ್ಲಿ ಮೂಡಿದ ಈ ಭಾವನೆಯನ್ನು ಬದಲಾಯಿಸಬೇಕಾದರೆ ಅದು ಅಷ್ಟೊಂದು ಸುಲಭವಲ್ಲ ನಾವು ಪ್ರಯತ್ನ ಮಾಡುವುದರೊಳಗಾಗಿ ನಮ್ಮ ಆಯುಷ್ಯವೇ ಮುಗಿದು ಹೋಗುತ್ತೆ ಅಲ್ಲದೆ ನಮ್ಮ ಕಾರ್ಯವು ಅಷ್ಟೊಂದು ಸರಳವಾದದ್ದಲ್ಲ ಎಂದು ರಾಮು ನುಡಿದನು.

ಮಾನವ ಪ್ರಯತ್ನಪಟ್ಟರೆ ಏನೆಲ್ಲ ಮಾಡಲೂಬಹುದು ರಾಮು ಸಾವಿರಾರು ವರ್ಷಗಳ ಹಿಂದಿನಿಂದ ದೇವರೆಂದು ಪೂಜಿಸುತಿದ್ದ ಚಂದ್ರನನ್ನು ಮಾನವ ತನ್ನ ಸತತ ಪ್ರಯತ್ನದಿಂದಲೇ ಅಲ್ಲಿಗೆ ಹೋಗಿದ್ದು, ಅಲ್ಲದೆ ಸೂರ್ಯನ ಕಿರಣಗಳನ್ನು ಕೂಡಿಹಾಕಿ ಅದರಿಂದ ವಿದ್ಯುತ್‌ನ್ನು ತಯಾರಿಸುವ ವಿಧಾನವನ್ನು ಕಂಡುಹಿಡಿದನು. ಪ್ರಯತ್ನ ಪಟ್ಟರೇ ಎಂಥಹ ಕಾರ್ಯಗಳನ್ನು ಸಾಧಿಸಬಹುದೆಂಬುವನ್ನು ಮನದಲ್ಲಿ ಇಟ್ಟುಕೊಂಡು ಮುನ್ನಡೆಯಬೇಕು. ಅದರ ಸಲುವಾಗಿಯೇ ದೊಡ್ಡಕ್ರಾಂತಿ ಆಗಬೇಕು ಮಾನವರೆಲ್ಲರೂ ಒಂದೇ ಅವರ ಪರಿಶುದ್ಧವಾದ ಮನ-ಸ್ಸನ್ನು ವಂಚಿಸಿ ಅವರು ಹೆದರುವಂತೆ ಮಾಡಿದ ಸಮಾಜವನ್ನು ಸಮಾಜದ ಹಿರಿಯರನ್ನು ಮೊದಲು ವಿರೋಧಿಸಬೇಕೆಂದು ಹೇಳಿದ ಮಧುಕರ ಮಾತನ್ನು ರಾಮು ನಗುತ್ತ ಮಧು ಇದೇ ಮಾರ್ಗ-ದಲ್ಲಿ ಹೋದ ಹನ್ನೆರಡನೆಯ ಶತಮಾನದ ಮಹಾನ್‌ವ್ಯಕ್ತಿ ಬಸವಣ್ಣನವರ ಗತಿ ಏನಾಯ್ತು ? ಈಡೀ ಮಾನವ ಜನಾಂಗ ಒಂದೇ ಎಂಬ ಸತ್ಯದ ಅರಿವನ್ನು ಜಗಕ್ಕೆ ಸಾರಿ ಹೇಳಿದ್ದಕ್ಕಾಗಿ ಅಲ್ಲದೆ ಅದನ್ನು

ಕಾರ್ಯರೂಪಕ್ಕೆ ತರಲು ಹೊರಟು ಸಫಲರಾಗ ದುಷ್ಟಶಕ್ತಿಗಳು ತಮಗಿನ್ನು ಉಳಿಗಾಲವಿಲ್ಲವೆಂದು ತಿಳಿದು ಅವರನ್ನು ಅಪಪ್ರಚಾರ ಮಾಡುತ್ತ ದೊಡ್ಡದೊಂದು ಗುಂಪನ್ನೇ ಸೃಷ್ಟಿಸಿದರು. ಈ ದುಷ್ಟ ಶಕ್ತಿ ಬಲಕ್ಕೆ ಹೆದರಿ ತಮಗಿನ್ನು ಭೂಮಿಯ ಮೇಲೆ ಉಳಿಗಾಲವಿಲ್ಲವೆಂದು ತಿಳಿದು ಕೂಡಲ ಸಂಗಮದಲ್ಲಿ ಐಕ್ಯರಾಗಬೇಕಾಯ್ತು. ಆದರಂತೆ ಶ್ರಮಜೀವಿಗಳನ್ನು ಒಂದುಗೂಡಿಸಿ ಅವರ ಹಕ್ಕುಭಾಧ್ಯತೆಗಳನ್ನು ತಿಳಿಸಿಹೇಳಿ ಮಾನವರೆಲ್ಲರೂ ಒಂದೇ ದುಡಿಯುವ ವರ್ಗ ಬೇರೆಯಲ್ಲ ದುಡಿಸಿಕೊಳ್ಳುವ ವರ್ಗ ಬೇರೆಯಲ್ಲ. ಬಡವ ಬಲ್ಲಿದವರೆಂದೆ, ಸಮಾಜವು ನಮ್ಮ ಮೇಲೆ ಹೇರಿದ ಹೊಲಸು ಪದ ಎಲ್ಲರೂ ಸಮಾನರು ಎಂದು ಜಯಪ್ರಕಾಶನಾರಾಯಣರು ಸಾರಿಹೇಳಿದರು ಕೊನೆಗೆ ಅವರ ಗತಿಯೇನಾಯ್ತು ಎಂಬುದು ತಿಳಿದ ಕೋ ಮಧು ಸಮಾಜವಾದ ಸಮಾಜದಲ್ಲಿ ತರುವುದು ಬಲ, ಕಷ್ಟಕರವಾದ ಕೆಲಸ ಎಂದು ರಾಮು ನುಡಿದಾಗ ಹೌದು ರಾಮು ಆ ಹಾದಿ ಬಲು ಕಷ್ಟಕರವಾದರೂ ಮುಂದೆ ಮಾತ್ರ ಎಲ್ಲರಿಗೂ ಸುಖಕರವಾದ ಕಾಲವೆಂದು ಹೇಳಬಹುದು ಎಂದು ಮಧುಕರ ನುಡಿಯುತ್ತಿರಲು ಕಮಲ, ಭಾಗ್ಯ ಹಾಗೂ ಮಂಗಲ ಅವರಿದ್ದಲ್ಲಿಗೆ ಬರುವರು.

ರಾಮಣ್ಣ ಮನೆಗೆ ಬರೋದಿಲ್ಲವೆ ಆಗಲೇ ಎಂಟಾಯ್ತು ಎಂದೇ ಮಂಗಲಾ ನುಡಿಯಲು ಗಡಿಯಾರವನ್ನು ನೋಡಿಕೊಂಡು ಓ ! ಹೌದಲ್ಲವೆ ಮಾತನಾಡುತ್ತ ಕುಳಿತಿವಿ ವೇಳೆಯಾದದ್ದು ತಿಳಿಯಲೇಯಿಲ್ಲವೆಂದು ರಾಮು ನುಡಿದಾಗ ಪಕ್ಕದಲ್ಲಿ ಮಾತಿನಗಿಣಿಯಿರಬೇಕಾದ್ರೆ ಮಾತಿಗೇನು ಕಡಿಮೆ ಅಲ್ಲವೆ ಮಧುಕರರವರೆ ಎಂದ ಮಂಗಲಾ ನುಡಿದಾಗ ಅದೇನಿಲ್ಲಮ್ಮ ನಮಗೂ ಬೇರೇನೂ ಕೆಲಸವಿರಲಿಲ್ಲ ಅದಕ್ಕೆ ಕುಳಿತಿದ್ವಿ ಎಂದು ಮಧು ಹೇಳಲು ಅಂದಹಾಗೆ ನಿಮಗೆ ಪರಿಚಯ ಮಾಡಿಸಲಿಲ್ಲ ಬೇಜಾರಾಗಬೇಡಣ್ಣ ಇವಳು ಭಾಗ್ಯ ಅಂತ ನಗರದ ಪ್ರಮುಖ ಶ್ರೀಮಂತರ ಮಗಳು ಇವಳು ಕಮಲಾಂತ ಇವಳೂ ಕೂಡಾ ಅಷ್ಟೇ ನಮ್ಮ ಕಾಲೇಜದ ಛೇರಮನ್‌ರ ಮಗಳು ಎಂದು ಹೇಳಿ ಇವರು ನಮ್ಮಣ್ಣ ರಾಮು, ಅವರು ಮಧುಕರಂತ

ಡಿಗ್ರಿತರಗತಿಯಲ್ಲಿ ಓದುತ್ತಿದ್ದಾರೆ ಅಂದಹಾಗೆ ಉಳಿದ ನಿಮ್ಮ ಗುಂಪೆಲ್ಲಿ? ಎನ್ನುತ್ತ ಇವರ ಸಂಗಡ ಇನ್ನು ನಾಲ್ಕು ಜನರಿರತಾರೆ ಇವರೆಲ್ಲರದು ಒಂದೇ ಅಭಿಪ್ರಾಯ. ಎಲ್ಲಾ ವಿಷಯದಲ್ಲಿಯೂ ಎಂದು ನುಡಿದು ನೀವು ನಮ್ಮ ಕಾಲೇಜಿಗೆ ಬರುತೀರಲ್ಲ ನಿಮಗೆ ಗೊತ್ತಾಗುತ್ತೆ ಎನ್ನುತ್ತ ಅಣ್ಣ ಇವರಿರ್ವರೂ ನಮ್ಮ ಕಾಲೇಜಿಗೆ ಹೊಸ ವಿದ್ಯಾರ್ಥಿನಿಯರು ಎನ್ನಲು ಹೋ ಹಾಗೋ ತುಂಬಾ ಸಂತೋಷವೆಂದು ಮಧುಕರ ಕಮಲಳನ್ನು ರಾಮು ಭಾಗ್ಯಳನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದಾಗ ಅವರೂ ಸಹ ಅವರನ್ನೆ ನೋಡುತ್ತಿರಲೂ ಎಲ್ಲ ಕಣ್ಣುಗಳು ಸಂಧಿಸುವವು. ಅಷ್ಟರಲ್ಲಿ ಉದ್ಯಾನವನದ ಗಂಟೆಯು ಬಾರಿಸುವುದು ಅದನ್ನರಿತು ಎಲ್ಲರೂ ಹೊರಗೆ ಬರುವರು. ದಾರಿಯ ಮಧ್ಯದಲ್ಲಿ ರಾಮು ಹಾಗೂ ಮಂಗಳಾರ ನಗೆಯ ಚುಟುಕುಗಳನು ಸವಿಯುತ್ತ ಹೋದರು. ಕೊನೆಯಲ್ಲಿ ಅವರೆಲ್ಲರೂ ಪರಸ್ಪರರಿಗೆ ಧನ್ಯವಾದಗಳನ್ನು ಹೇಳುತ್ತ ತಮ್ಮ ತಮ್ಮ ಮನೆಗೆ ಹೋದರು.

ಕಾಲೇಜ್ ಆವರಣದಲ್ಲಿ ಅಂದು ಹೊಸದಾಗಿ ಸೇರಿದವರೂ ಇದ್ದರು. ಹಳಬರೂ ಇದ್ದರು. ಕಾಲೇಜ ಅದೊಂದು ದೇವಮಂದಿರ ಅಲ್ಲಿ ಅನೇಕ ಬಕುತರು ಬರುವರು ಎಲ್ಲರೂ ತಮಗಿಷ್ಟವಾದುದನ್ನು ಓದುವರು. ಶ್ರದ್ಧೆ ನಿಶ್ಠೆಯಿಂದ ಓದಿದ ವಿದ್ಯಾರ್ಥಿಗಳು ಫಲವನ್ನು ಪಡೆಯುವರು. ಅದರ ದುರುಪಯೋಗವನ್ನು ಪಡೆದು ಮೋಜಿಗಾಗಿ ಬಂದು ಸೇರಿದ ದೀಪಕ ಕಾಮೇಶರಂತಹ ವಿದ್ಯಾರ್ಥಿಗಳು ಬಂದು ಹಿಂದಿನ ಬೆಂಚಿನ ವಿದ್ಯಾರ್ಥಿಗಳು ನಾವು ಕಲ್ಲು ಬಂಡೆಗಳಿದ್ದಂತೆ ಎಂದು ಹಾಡುತ್ತ ತಮ್ಮ ಜೀವನವನ್ನು ಹಾಳು ಮಾಡಿಕೊಳ್ಳುವರಲ್ಲದೆ ಉಳಿದ ಹುಡುಗರನ್ನು ಹಾಳುಮಾಡುತ್ತ ತಿರುಗುವ ವಿದ್ಯಾರ್ಥಿಗಳೂ ಬರುವರು. ಅಲ್ಲದೆ ಹುಡುಗಿಯರೂ ಸಹ ತಮ್ಮ ಸಮಾನತೆಯನ್ನು ಪ್ರದರ್ಶಿಸಿ ತೋರಿಸುವ ಸಲುವಾಗಿ ಗಂಡಸರ ಹಾಗೆ ಉಡುಗೆ ತೊಡುಗೆಗಳನ್ನು ಹಾಕಿಕೊಂಡು ತಾವು ಯಾರಿಗೇನು ಕಡಿಮೆಯೆಂದು ಹೇಳುತ್ತ ಕಂಡ ಕಂಡವರನ್ನು ಕಂಡು ಹಲ್ಲುಗಳನ್ನು ಪ್ರದರ್ಶಿಸುತ್ತ ತಾವು ವಿದ್ಯೆಯನ್ನು ಕಲಿಯದೆ ಹುಡುಗರ ಬುದ್ಧಿ ವಿದ್ಯೆಯನು

ಹಾಳುಮಾಡಿ ಅವರ ಮುಂದಿನ ಜೀವನಕ್ಕೆ ನಾಂದಿಯಾದ ವಿದ್ಯಾರ್ಥಿ ಜೀವನವನ್ನೇ ಹಾಳುಮಾಡಿ ಬಿಡುವರು. ಇಂಥ ಈ ದೇವಮಂದಿರದಲ್ಲಿ ಮಧುಕರ, ರಾಮು, ಆನಂದ, ರಾಜೇಶರಂತಹ ಮೇಧಾವಿಗಳೂ ಬಂದಿದ್ದಾರೆ. ಮಧುಕರನಂತಹ ಮೇಧಾವಿಯನ್ನು ಪಡೆದ ಈ ಕಾಲೇಜ ಧನ್ಯನೆಂದೇ ಹೇಳಬಹುದು. ಸದ್ಗುಣ ಸಂಪನ್ನರಾದ ಮಧುಕರ ಎಲ್ಲರ ಪ್ರೀತಿಗೆ ಪಾತ್ರನಾಗಿದ್ದನು. ಉಪನ್ಯಾಸಕರಿಗಂತೂ ಬಲು ಅಚ್ಚುಮೆಚ್ಚಿನವನಾಗಿದ್ದನು. ಯಾರಾದರೂ ಹೊಸದಾಗಿ ಕಾಲೇಜಿಗೆ ಸೇರಿದರೆ ನೋಡಿರಿ ಮಧುಕರರಂತಹ ಹುಡುಗರು ನೀವಾಗಬೇಕು ಅವನ ಸಂಗವನ್ನು ಬಯಸಿರಿ. ನೀವೂ ಆತನಂತೆ ಬುದ್ಧಿವಂತರಾಗುವಿರಿ ಎಂದೇ ಹೇಳುತ್ತಿದ್ದರು.

ಇಂದು ಕಾಲೇಜಿಗೆ ಕಮಲಾ ಭಾಗ್ಯರೂ ಬಂದಿದ್ದರು ಅವರನ್ನು ಕಂಡ ಪೋಲೀ ಹುಡುಗರು ಗಂಗೆ-ಗೌರಿ ಹೊಸದಾಗಿ ಬರತಾಯಿ-ದಾರಂತೆ ಕಾಣತ್ತೆ ಕಣೋ ಅಲ್ಲಿ ನೋಡು ಶ್ವೇತಾಂಬರಿಗಳು ಎಂದು ನುಡಿದಾಗ ರಂಗ ಅವರು ಯಾರು ಅಂದುಕೊಂಡೆ ನಗರದ ಪ್ರಮುಖರ ಮಕ್ಕಳು ಕಣೋ ಅವರ ತಂಟೆಗೆ ನೀನೇನಾದ್ರು ಹೋದೆ ರಂಗಾ ಈ ನಿನ್ನ ಮುಖ ಮಂಗನಹಾಗೆ ಆಗುತ್ತೆ ನೋಡು ಎಂದು ಒಬ್ಬ ನುಡಿದಾಗ ಹೌದಾ ಹಾಗಾದರೆ ಬೇಡ ಕಣಪ್ಪ ಅವರ ತಂಟೆ ಎಂದು ನುಡಿದ ರಂಗನ ಗುಂಪು ಹಿಂದೆ ಸರಿಯಿತು. ಹೀಗೆ ಕಾಮೇಶ ದೀಪಕರ ಗುಂಪೊಂದು ತಿರುಗುತ್ತಿತ್ತು. ಇದಲ್ಲದೆ ಮಮಲಾಜ ಲಿಲ್ಲಿಯರ ಗುಂಪೊಂದು ಹುಡುಗರ ಸಂಗಡ ಲಲ್ಲೆ ಹೊಡೆಯುತ್ತ ತಿರುಗುತ್ತಿತ್ತು. ಕಾಲೇಜದ ಬಿಡುವಿನ ವೇಳೆಯಲ್ಲಿ ಇವರೆಲ್ಲರಿಗೂ ಕೆಲಸಗಳು. ಇಲ್ಲವೆ ಪರೇಡಿಗೆ ಚಕ್ಕರ್ ಕೊಟ್ಟು ತಿರುಗುವುದು ಕೆಲವೊಂದು ವಿದ್ಯಾರ್ಥಿಗಳ ಕೆಲಸವಾಗಿರುತ್ತಿತ್ತು ಆದರೆ ಮಧುಕರನ ಗುಂಪು ಬಿಡುವಿನ ವೇಳೆಯಲ್ಲಿ ಕಾಲೇಜಿನ ಹೂದೋಟದಲ್ಲಿ ನಾನಾತರಹದ ಹೂವಿನ ಮರಗಳನ್ನು ಬೆಳಸಿದ್ದರು. ಅಲ್ಲದೆ ಚಿಕ್ಕಪುಟ್ಟ ಗಿಡಮರಗಳನ್ನು ಸಹ ಬೆಳಸಲಾಗಿತ್ತು. ಅವರ ಸ್ವಚ್ಛತೆಗಾಗಿ ಈ ಗುಂಪು ದಿನಾಲು ಏನಾದರೊಂದು ಕೆಲಸವನ್ನು

ಮಾಡಿ ಸ್ವಚ್ಛತೆಯಿಂದ ಇಡಲು ಕಾರಣವಾಗುತ್ತಿತ್ತು.

ಬಿಡುವಿನ ವೇಳೆಯಲ್ಲಿ ಕಮಲಾ, ಭಾಗ್ಯ ಹಾಗೂ ಮಂಗಲ ಹೂದೋಟದ ಕಡೆಗೆ ಬಂದರು, ಅಲ್ಲಿ ರಾಮು, ಮಧು ಹಾಗೂ ಆನಂದ ತಿಂಡಿಯನ್ನು ತಿನ್ನುತ್ತಿರುವುದನ್ನು ಕಂಡ ಕಮಲ ನೋಡೇ ಮಂಗಲಾ ನಿಮ್ಮಣ್ಣ ಹಾಗೂ ಅವರ ಫ್ರೆಂಡ್ಸಿದ್ದಾರೆ ನೋಡೆನ್ನಲು ಎಲ್ಲೇ ಎಂದು ಮಂಗಲಾ ಕೇಳಲು ಅಲ್ಲಿ ನೋಡು ಆ ಮರದ ಕೆಳಗೆ ಕುಳಿತ್ತಿದ್ದಾರೆ ಎಂದು ಭಾಗ್ಯ ನುಡಿದಾಗ ಹಾಂ! ಹೌದಲ್ಲೇ ಭಾಗ್ಯ ಬನ್ನಿ ನಾವೂ ಅಲ್ಲಿಗೇನೆ ಹೋಗೋಣ ಎಂದು ನುಡಿಯಲು ಬೇಡ ಕಣೇ ನಾವಿಲ್ಲೆ ತಿನ್ನೋಣ ಎಂದು ಕಮಲಾ ನುಡಿದಾಗ ಇರಲಿ ಬನ್ನಿರೇ ಅವರೇನು ಹೊರಗಿನವರಾ ಎಂದು ನುಡಿಯುತ್ತ ಅವರೀರ್ವರನ್ನು ಕರೆದುಕೊಂಡು ಅವರಿದ್ದಲ್ಲಿಗೆ ಹೋದರು. ಹೋ ಬಾರಮ್ಮ ಮಂಗಲಾ ಬನ್ನಿ ಕುಳಿತುಕೊಳ್ಳಿ ಯಾಕೆ ತಡವಾಗಿ ಬಂದಿರಿ ಎಂದು ರಾಮು ನುಡಿಯಲು ನಾವು ಅಲ್ಪೋಪಹಾರಿಗಳು ನಿಮ್ಮಷ್ಟು ನಾವು ಬಕಾಸುರನ ಹಾಗೆ ತಿನ್ನುವವರಲ್ಲ ಎಂದು ಮಂಗಲಾ ನುಡಿದಾಗ. ನಿನ್ನ ತಿಂಡಿ ಬಿಚ್ಚಮ್ಮ ಗೊತ್ತಾಗುತ್ತೆ ಯಾರು ಬಕಾಸುರರಂತೆ ಎಂದು ಆನಂದ ನುಡಿದಾಗ ಎಲ್ಲರೂ ಬಂದು ಕೂಡ್ರುವರು. ರಾಮು ನಮ್ಮ ತಿಂಡಿ ಸ್ವಲ್ಪ ಬಡಿಸು ಅವರಿಗೆ ಎಂದು ಒಂದು ಡಬ್ಬವನ್ನು ಕೊಡುವನು. ಆಗ ಅವರೆಲ್ಲ ನಮಗೆ ಬೇಡ ನಮ್ಮದೆ ನಮಗೆ ಹೆಚ್ಚಾಗುತ್ತೆ ಎಂದು ಕಮಲಾ ನುಡಿದಾಗ ನಿಮಗೆ ಹೆಚ್ಚಾದರೆ ನಮಗೆ ಸ್ವಲ್ಪ ಕೊಡಿ ನಮ್ಮದು ಸ್ವಲ್ಪ ರುಚಿನೋಡಿ ಎಂದು ಆನಂದ ನುಡಿದಾಗ ಮಂಗಲಾ ನೀವು ತಂದ ತಿಂಡಿ ಹೆಂಗಸರು ಮಾಡಿದ್ದು ಇರಬಹುದು ಆದರೆ ನಮ್ಮದು ನಾವೇ ಮಾಡಿತಂದದ್ದು ಆದಕ್ಕೇನಾದರೂ ಹೆಚ್ಚು ಕಡಿಮೆಯಾಗಿದ್ದರೆ ಸುಧಾರಿಸಿಕೊಂಡು ತಿನ್ನಬೇಕು ಎಂದು ಮುಸುಕರ ನುಡಿದಾಗ ಸರಿ ಎಂದು ಎಲ್ಲಾ ನಗುವರು.

ನಗರದಲ್ಲಿಯೇ ಹೆಸರುವಾಸಿಯಾದವರು ಸಂಗಪ್ಪ ಮಾಸ್ತರು. ಕನ್ನಡ ಶಾಲೆಯಲ್ಲಿ ಮುಖ್ಯ ಉಪಾಧ್ಯಾಯರಿದ್ದರು. ಅವರು ತಮ್ಮ ಸೇವೆಯನ್ನು ಮುಗಿಸಿ ನಗರದಲ್ಲಿಯೇ ಸ್ವತಃ ಮನೆಯಲ್ಲಿ ವಾಸಿಸುತ್ತಿದ್ದರು. ಸಂಗಪ್ಪ ಮಾಸ್ತರರ ತಂದೆ, ಸಹ ಮಾಸ್ತರರು. ಬಲು ಮೇಧಾವಿಗಳರ ಹಾಗೂ ಅಷ್ಟೇ ನಿಷ್ಠೆಯಿಂದ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಸರಕಾರದಿಂದ ಬಡವಿದ್ಯಾರ್ಥಿಗಳಿಗೆಂದು ಬಂದಿದ್ದ ತಿನ್ನಲು ತಿಂಡಿ ಹಾಗೂ ಹಾಲನ್ನು ಕೊಡುತಿದ್ದರು. ಸಂಗಪ್ಪಮಾಸ್ತರರು ಈ ನಗರಕ್ಕೆ ಬರುವುದಕಿಂತ ಮುಂಚೆ ಯಾವ ವಿದ್ಯಾರ್ಥಿಗಳಿಗೂ ಅದು ಸಿಗುತ್ತಿ ಲ್ಲಿಲ್ಲ ಅದನ್ನೆಲ್ಲ ನಗರದ ಪ್ರಮುಖರು ಹಂಚಿಕೊಂಡು ಬಿಡುತಿದ್ದರು. ಇವರು ಬಂದನಂತರ ಪ್ರಮುಖರಿಗೆ ಬಹಳ ತೊಂದರೆಯಾಯಿತು ಅಷ್ಟೇ ಅಲ್ಲದೆ ಸರಕಾರವು ಒದಗಿಸಿದ ಆಹಾರವು ಧಾರಾಳವಾಗಿ ಸಿಗಲು ಹತ್ತಿತು. ಹೀಗೆಯೇ ಸ್ವಲ್ಪ ದಿನಗಳಾದ ನಂತರ ಮಾಸ್ತರರನ್ನು ಕರೆದು ಎಲ್ಲರೂ ಸೇರಿ ಹಂಚಿಕೊಳ್ಳೋಣ ಎಂದು ಹೇಳಿದಾಗ ಅವರು ನಿರಾಕರಿಸಿ ಮೇಲ್ಗಡೆ ರಿಪೋರ್ಟನ್ನು ಕಳಿಸಿದರು. ನಂತರ ಪ್ರಮುಖರಿಗೆ ಮುಖಭಂಗವಾಯ್ತು. ಇವರ ಮೇಲೆ ಹೇಗಾದರೂ ಮಾಡಿ ಸೇಡನ್ನು ತೀರಿಸಿಕೊಳ್ಳುವ ತರಾತುರಿಯಲ್ಲಿದ್ದರು. ಸಮಯ ಸಾಧಿಸಿ ಮಾಸ್ತರ ಮನೆಯ ಹಿತ್ತಲದಲ್ಲಿ ಹಾಲಿನ ಪುಡಿಯನ್ನು ಹಾಕಿ ಅದೇ ಸಮಯದಲ್ಲಿ ಮೇಲಾಧಿಕಾರಿಗಳು ಅಲ್ಲಿಗೆ ಬರುವಂತೆ ಹೇಳಿದ್ದರು. ಆದರಂತೆ ಮೇಲಾಧಿಕಾರಿಗಳು ಬಂದಾಗ ಮಾಸ್ತರ ಮನೆಯಲ್ಲಿ ಹಾಲಿನಪುಡಿ ಸಿಕ್ಕಾಗ ಅವರಿಗೆ ಬಹಳ ಸಂಕಟವಾಯ್ತು ಆಗ ಸಂಗಪ್ಪಮಾಸ್ತರರು ಕೇವಲ ಹದಿಮೂರು ವರ್ಷದವರು ಇದ್ದರು ಮುಂದೆ ಮಾಸ್ತರರ ಗೌರವಕ್ಕೆ ಧಕ್ಕೆ ಬಂದುದಕ್ಕೆ ಕೆಲವೇ ದಿನಗಳಲ್ಲಿ ಸಂಗಪ್ಪ ಮಾಸ್ತರರ ತಂದೆ ಮರಣವನ್ನಪ್ಪಿದ್ದರು.

ಮುಂದೆ ಮಾಸ್ತರರನ್ನು ಬಹಳ ತೊಂದರೆಯಿಂದ ಬೆಳಸಿದರು

ಅವರ ತಾಯಿ ಮುಂದೆ ಸಂಗಪ್ಪ ಮಾಸ್ತರರನ್ನು ಸರಕಾರವು ನೌಕರಿಗೆ ಆಹ್ವಾನಿಸಿದಾಗ ಅವರ ತಾಯಿ ಹಿಂದಿನ ಎಲ್ಲ ಇತಿ ಹಾಸವನ್ನು ಹೇಳಿ ಮಗನಿನಿಂದ ಪ್ರಮಾಣವನ್ನು ತೆಗೆದುಕೊಂಡು ಕೆಲಸಕ್ಕೆ ಸೇರಿಸಿದ್ದರು. ಅವಳ ಹೇಳಿಕೆಯಂತೆ ಸಂಗಪ್ಪ ಮಾಸ್ತರರು ನ್ಯಾಯ ನಿಷ್ಠೆಯಿಂದ ದುಡಿದು ಎಲ್ಲರ ಪ್ರೀತಿಯ ಪಾತ್ರರಾಗಿದ್ದರು ಅಲ್ಲದೆ ಅವರ ಹತ್ತಿರ ಅತೀ ಸಲಿಗೆಯಿಂದ ಶಿಷ್ಯವೃತ್ತಿಯನ್ನು ಪಡೆದವರಲ್ಲಿ ಮಧುಕರ ರಾಮು, ಆನಂದ, ಮೂರ್ತಿ ಹಾಗೂ ಗೋಪಾಲ ರಾಜೇಶ ಕಂಡು ಸಂಗಪ್ಪ ಮಾಸ್ತರರು ಈ ಗುಂಪನ್ನು ಬಲು ಜಾಣತನದಿಂದ ತಯಾರಿಸಿದ್ದರು. ಈ ಗುಂಪನ್ನು ನ್ಯಾಯ-ನೀತಿ ನಿಷ್ಠೆಯ ಪ್ರತೀಕಗಳಾಗಿ ಮಾಡಿದ್ದರು. ನಗರದ ಅನೇಕ ಕುಂದು ಕೊರತೆಗಳ ಬಗ್ಗೆ ಆಗಾಗ ಎಲ್ಲರೂ ಸೇರಿಕೊಂಡು ಚರ್ಚಿ-ಸುತಿದ್ದರು.

ನಗರದಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಸರಿಯಾಗಿಲ್ಲ. ರಸ್ತೆಯಲ್ಲಿಯ ವಿದ್ಯುದ್ದೀಪಗಳೂ ಹೋಗಿ ನಾಲ್ಕಾರು ತಿಂಗಳಾಯ್ತು ಇನ್ನೂ ಹಾಕಿಲ್ಲ. ಅಲ್ಲದೆ ಸರಕಾರವು ಬಡವರ ಸಲುವಾಗಿ ಜನತಾ ಮನೆಗಳನ್ನು ಒದಗಿಸಿದೆ. ಪಕ್ಕದ ನಗರದಲ್ಲಿ ಮನೆಗಳನ್ನು ಕಟ್ಟಿಸಿ ಜನರೆಲ್ಲ ವಾಸವಾಗಿದ್ದಾರೆ. ಆದರೆ ನಮ್ಮಲ್ಲಿ ಕಾಲಿಜಾಗೆಗಳನ್ನು ಹುಡುಕಿಟ್ಟದ್ದಾರೆ ಮುಂದಿನ ಯಾವುದೇ ಕೆಲಸ ಪ್ರಾರಂಭವಾಗಿಲ್ಲ. ಈ ಎಲ್ಲ ವಿಷಯಗಳ ಬಗ್ಗೆ ಇಂದು ನಾವು ಚರ್ಚಿಸಿ ಛೇರ್‌ಮನ್‌ರಿಗೆ ವಿಚಾರ ಮಾಡೋಣ ಎಂದು ಮಧುಕರ ನುಡಿಯಲು ಜನತಾ ಮನೆಗಳನ್ನು ಕಟ್ಟಲು ಹಣವನ್ನು ಇನ್ನೂ ಒದಗಿಸಿಲ್ಲವೆಂದು ಇವರು ಹೇಳುವರು. ಆದರೆ ನಗರಾಭಿವೃದ್ಧಿ ಮಂಡಲಿಯವರು ನಿಮ್ಮ ನಗರಕ್ಕೆ ಎಲ್ಲ ಹಣವನ್ನು ಕೊಟ್ಟದೆ ಯಾವುದು ಬಾಕಿಯಿಲ್ಲವೆಂದು ಹೇಳುವರೆಂದು ಆನಂದ ನುಡಿಯಲು ಹಾಗಾದರೆ ಮನೆಗಳನ್ನು ಕಟ್ಟಿಸಿದ ಸಮಯದಲ್ಲಿ ಪರಿಕ್ಷಕರು ಬಂದಿಲ್ಲವೆ? ಆದರ ಬಗ್ಗೆ ದಾಖಲೆಗಳಿರಲಿಲ್ಲ ಎಂದು ರಾಮು ನುಡಿದಾಗ ಅದರ ಬಗ್ಗೆ ಯಾವುದೇ ತರಹದ ದಾಖಲೆಗಳಿಲ್ಲ ಎಂದು ಸಂಗಪ್ಪಮಾಸ್ತರರು ನುಡಿವರು. ನಗರವಲ್ಲಿ

ನೀರಿನ ಸರಬರಾಜುವಿನ ಸಲುವಾಗಿ. ಮತ್ತೆರಡು ನೀರಿನ ಟ್ಯಾಂಕುಗಳು ಮಂಜೂರು ಆಗಿವೆಯೆಂದು ಪೇಪರಿನಲ್ಲಿ ಬಂದಿತ್ತಲ್ಲ ಎಂದು ರಾಜೇಶ್ ಕೇಳಿದಾಗ ಅವುಗಳು ಸ್ಯಾಂಕ್ಷನ್ ಆಗಿದ್ದಷ್ಟೆ ಅಲ್ಲ ಅರ್ಧ ಹಣವೂ ಸಹ ಬಂದಿದೆ ಎಂದು ನಗರಸಭೆಯ ಮುಖ್ಯಅಧಿಕಾರಿ ಹೇಳುತ್ತಿದ್ದರು ಎಂದು ಸಂಗಪ್ಪ ಮಾಸ್ತರರು ನುಡಿದಾಗ ಹಾಗಾದರೆ ಟ್ಯಾಂಕುಗಳನ್ನ ಎಲ್ಲೆಲ್ಲಿ ಕಟ್ಟಿಸುವರು ಎಂದು ಯಾರಿಗಾದರೂ ಗೊತ್ತಾಗಿದೆಯೇ ಎಂದು ಆನಂದ ಕೇಳಿದಾಗ ಒಂದು ನಾಗನಗೌಡರ ಮಿಲ್ಲಿನ ಹತ್ತಿರ ಇನ್ನೊಂದು ಕರೀಮುಖಾನರ ಹಾಗೂ ರೇವಣ್ಣರ ಗದ್ದೆಗಳ ಹತ್ತಿರ ಎಂದು ಸ್ವಾಮಿ ನುಡಿದಾಗ ತುಂಬಾ ಅನ್ಯಾಯ ಸ್ವಾರ್ಥಕ್ಕಾಗಿ ಆ ಜಾಗೆಗಳನ್ನು ಆರಿಸಿದ್ದಾರೆ. ಅವುಂದ ಸಾರ್ವಜನಿಕರಿಗೆ ಉಪಯೋಗವಾಗುವುದಿಲ್ಲ ಎಂದು ರಾಜೇಶ ನುಡಿಯಲು, ಇದನ್ನು ಹೇಗಾದರೂ ಮಾಡಿ ತಡೆಹಿಡಿಯಬೇಕು.

ಇದಲ್ಲದೆ ಇನ್ನೊಂದು ಮುಖ್ಯವಾದ ವಿಷಯ ನಿನ್ನೆ ನಾಗನ ಗೌಡರ ಮಿಲ್ಲಿನ ಸಂಬಳದ ದಿನವಾದ್ದರಿಂದ ಮಿಲ್ಲಿನಿಂದ ಬರುವಾಗ ಒಂದು ಗುಂಪು ಬಂದು ನಾಲ್ಕಾರು ಜನರ ಸಂಬಳವನ್ನೇ ಕಸಿದು ಕೊಂಡು ಪಾರಾಗಿದ್ದಾರೆ. ಅದಕ್ಕೆಂದು ಇಂದು ಬೆಳಿಗ್ಗೆ ಮಾಲಿಕರ ಹತ್ತಿರ ಹೋಗಿ ಮುಂದೆ ದುಡಿದಾಗ ವಜಾಮಾಡುವಿರಂತೆ ಈಗ ಸ್ವಲ್ಪ ಹಣವನ್ನು ಕೊಡಿರೆಂದು ಎಷ್ಟು ಅಂಗಲಾಚಿ ಬೇಡಿದರೂ ಮಾಲಿಕರು ಕೊಡದೇ ಅವರನ್ನು ಮನಸ್ಸಿಗೆ ಬಂದಂತೆ ಬೈದು ಕಳಿಸಿದ ರಂತೆ, ಅಲ್ಲದೆ ನಿಮ್ಮ ಹತ್ತಿರ ಹಣವು ಇರಬಾರದು ಅಂದರೇನೆ ನೀವು ನಮಗೆ ಬಗ್ಗುವದು ಇಲ್ಲದಿದ್ದರೆ ನಮ್ಮ ಸಂಬಳದಿಂದು ನಮಗೆ ಗುರ್ರೆನ್ನುವ ನಾಯಿಗಳು ನೀವು ಹೀಗೆ ಅನೇಕ ರೀತಿ ಹೊಲಸು ಮಾತನಾಡಿದರೆಂದು ಬಸವರಾಜ ಹೇಳಿದನು. ಹೀಗೆಯೇ ಅವರನ್ನು ಮುಂದುವರೆಯುವದಕ್ಕೆ ಬಿಟ್ಟರೆ ಮುಂದೆ ಮತ್ತೇನಾದರೂ ಮಾತನಾಡತಾನೆ. ಕೆಲಸಗಾರರು ದುಡಿದ ಹಣದಲ್ಲಿ ತಿಂದು ತೇಗುವ ನಾಯಿ ಅವನು ತಾನು ಯಾರಿಂದ ಬದುಕಿದ್ದೇನೇ ಅನ್ನೋದನ್ನು ಅವನಿಗೆ ಅರಿವು ಮಾಡಿ ಕೊಡಬೇಕು. ದುಡಿಮೆಗಾರರೆಂದರೆ ಏನೆಂದು

ತಿಳಿದಿದ್ದಾನೆ ಆವನಿಗೆ ಬುದ್ಧಿ ಕಲಿಸಲೇಬೇಕು ಎಂದು ಸಂಗಪ್ಪಮಾಸ್ತರರು ನುಡಿಯಲು, ನಗರದ ಪ್ರಮುಖರೆಂದು ಹೇಳಿಕೊಂಡು ಸಮಾಜದಲ್ಲಿ ದೊಡ್ಡವರೆಂಬ ನಾಮಫಲಕವನ್ನು ಹೊಂದಿದ ಈ ನೀಚರನ್ನ ಅವರ ಆನುಯಾಯಿಗಳನ್ನು ಸಧೆಬಡಿಯಬೇಕು. ಅವರಿಗೆ ಸರಿಯಾದ ಬುದ್ಧಿ ಕಲಿಸಬೇಕು ಎಂದು ರಾಮು ರೋಷದಿಂದ ನುಡಿದನು.

ಈ ನೀಚರು ಒಳ್ಳೆಯ ಯಾವ ಕೆಲಸಗಳನ್ನು ಮಾಡಿದ್ದಾರೆ ನಗರದಲ್ಲಿಯ ಎಲ್ಲಾ ಆಸ್ತಿಪಾಸ್ತಿ ನುಂಗಿ ನೀರುಕುಡಿದರು. ಇವರನ್ನು ಹೀಗೆಯೇ ಮುಂದುವರೆಯಲು ಬಿಟ್ಟರೆ ನಮ್ಮೆಲ್ಲರನ್ನು ಯಾರಿಗಾದರೂ ಮಾರಲಿಕ್ಕೆ ಹಿಂಜರಿಯುವುದಿಲ್ಲ. ಆದಕ್ಕಾಗಿ ಹೋರಾಟವನ್ನು ಪ್ರಾರಂಭಿಸೋಣ. ನಮ್ಮನ್ನು ಸಮಾಜ ನಂಬಲಿ ನಂಬದೇ ಇರಲಿ ಅವರು ಮಾಡಿದ ಎಲ್ಲ ಹೇಯಃಕೃತ್ಯಗಳನ್ನು ಜನರಿಗೆಲ್ಲ ತಿಳಿಸಿಹೇಳೋಣ ಎಂದು ಮಾಸ್ತರರು ನುಡಿದಾಗ, ಅವರ ವಿರುದ್ಧ ಗುಂಪನ್ನು ಕಟ್ಟುವದು ಅಷ್ಟೊಂದು ಸುಲಭವೆಂದು ತಿಳಿದಿರಾ ಎಂದು ಬಸವರಾಜ ನುಡಿದಾಗ, ನಮ್ಮ ಹಾದಿ ನ್ಯಾಯವಾದದ್ದು ಎಂದು ಜನರಿಗೆ ತಿಳಿಯುವವರೆಗೆ ಸುದಾರಿಸಿಕೊಂಡು, ಬಂದ ಎಲ್ಲಾ ಕಷ್ಟಗಳನ್ನು ಅನುಭವಿಸಬೇಕು ಎಂದು ರಾಮು ನುಡಿಯಲು, ನ್ಯಾಯಕ್ಕೆ ಯಾವತ್ತಾದರೂ ಬೆಲೆ ಸಿಕ್ಕೇ ಸಿಕ್ಕುತ್ತೆಂಬ ದೃಢವಾದ ನಂಬಿಗೆಯನ್ನು ಇಟ್ಟುಕೊಳ್ಳಬೇಕು. ಸಮಾಜವನ್ನು ತಮ್ಮ ಸ್ವಾರ್ಥಕ್ಕಾಗಿ ಮನಬಂದಂತೆ ರಚಿಸಿಕೊಂಡು ಮಾನವನ ಮೇಲೆ ಹೊರಸಿರತಕ್ಕಂತಹ ನಾನಾಪ್ರಕಾರದ ನೈತಿಕ ಹಾಗೂ ಶಾರೀರಿಕ ದಾಸ್ಯಕ್ಕೆ ಎದುರಾಗಿ ಸ್ವಾರ್ಥದ ದುರಾಸೆಯ ಹಿತದ ಸಲುವಾಗಿ ಮಾನವ ಕುಲವನ್ನೇ ಮರ್ದಿಸತಕ್ಕಂತಹ ಎಲ್ಲಾ ವಿಧಾನಗಳಿಗೆ ಎದುರಾಗಿ ನಾವು ಹೋರಾಟ ಮಾಡೋಣ. ಎಂದು ಮಧುಕರ ಹೇಳಿದಾಗ ಪ್ರಾಣಿ ಮಾನವನನ್ನು ನಿಜವಾದ ಮಾನವನನ್ನಾಗಿ ಮಾಡಲು ಅತನಲ್ಲಿ ಇರತಕ್ಕಂತಹ ಪಶುತ್ವವನ್ನೆಲ್ಲ ಹೋಗಲಾಡಿಸಿ ಪರಿಶುದ್ಧವಾದ ಮನಸ್ಸು ಉಳ್ಳವನನ್ನಾಗಿ ಮಾಡಲು ಈ ತೆರನಾದ ಕ್ರಾಂತಿಕಾರಿ ಹೋರಾಟವೇ ಒಂದು ಮುಖ್ಯ ಸಾಧನ. ಅದನ್ನೇ ಕೆಲವರು ಸಮಾಜವಾದವೆಂದು ಕರೆದಿರುವರು. ಎಂದು ಮಾಸ್ತರು ನುಡಿಯಲು, ಹೌದು ಮಾಸ್ತರರು ಹೇಳಿದಂತೆ ಇದಿಷ್ಟೇ ನಮ್ಮದೊಂದು ಗುಂಪನ್ನು ಮಾಡಿಕೊಳ್ಳೋಣ ಸಮಾಜವಾದದ ತತ್ವಗಳ ಅಡಿಯಲ್ಲಿ ನಾವು ಸಂಪೂರ್ಣ ನಂಬಿಗೆ

ಯನ್ನು ಇಟ್ಟು ನಮಗೆಷ್ಟೇ ತೊಂದರೆಗಳು ಬಂದರೂ ಹಿಂಜರಿಯದೇ ಮುಂದೆ ಸಾಗೋಣ ಎಂದು ನುಡಿದರು.

ಅಷ್ಟರಲ್ಲಿ ಕರೀಮ ಹಾಗೂ ರಮೇಶ ಇವರಿಬ್ಬರಲ್ಲಿಗೆ ಬರುವರು. ಇಷ್ಟೇಕೆ ತಡಮಾಡಿದಿರಿ ಎಂದು ಮಾಸ್ತರರು ಕೇಳಿದಾಗ, ನಿನ್ನೆ ರಾತ್ರಿ ಚರ್ಚಿಸಿದ ಕೆಲವೊಂದು ವಿಷಯಗಳನ್ನು ಬರೆದು ನಗರಾಭಿವೃದ್ಧಿ ಮಂತ್ರಿಗಳು ಬಂದಿದ್ದಾರೆ ಅವರಿಗೆ ಕೊಟ್ಟು ಬಂದಿದ್ದೇವೆ. ಅವರು ಒಂದೆರಡು ಗಂಟೆಬಿಟ್ಟು ಬರಲು ಹೇಳಿದ್ದಾರೆ ಎಂದು ರಮೇಶ ನುಡಿದಾಗ, ತುಂಬಾ ಒಳ್ಳೆಯ ಕೆಲಸ ಮಾಡಿದಿರಿ ಬೇರೆ ಯಾರಿದ್ದಾರೆ ಎಂದು ಮಾಸ್ತರರು ಕೇಳಲು, ನಮ್ಮ ಮಂತ್ರಿಗಳು ಇದ್ದಾರೆ ವಿಧಾನ ಸಭೆಯ ಸದಸ್ಯರಿದ್ದಾರೆ ಎಲ್ಲರೂ ಸೇರಿ ಪ್ರವಾಸಿ ಮಂದಿರಕ್ಕೆ ಊಟಕ್ಕೆ ಹೋಗಿದ್ದಾರೆ ಎಲ್ಲರಿಗೂ ಅಲ್ಲಿಯೇ ಬರಲುಹೇಳಿದ್ದಾರೆ ಎಂದು ಕರೀಮ ನುಡಿಯಲು, ಈಗ ನಾವೆಲ್ಲರೂ ಹೋಗೋಣ ಅಲ್ಲದೆ ಇನ್ನು ಸಾಕಷ್ಟು ಜನರನ್ನೂ ಸಹ ಕರೆದುಕೊಂಡು ಹೋಗೋಣ ಪ್ರಮುಖರ ಬಣ್ಣವೆಲ್ಲ ಗೊತ್ತಾಗಬೇಕಲ್ಲವೆಂದು ಆನಂದ ನುಡಿದಾಗ ಒಳ್ಳೆಯ ವಿಚಾರವೆಂದು ತಿಳಿದು ಮತ್ತೆ ನೂರಾರು ಜನರನು ನಗರದ ಪ್ರಮುಖರು ಬರಲಿಕ್ಕೆ ಹೇಳಿದ್ದಾರೆಂದು ಹೇಳಿ ಕರೆದು ಕೊಂಡು ಹೋದರು. ಪ್ರವಾಸಿ ಮಂದಿರದ ಹೊರ ಆವರಣದಲ್ಲಿ ಎಲ್ಲರೂ ಕುಳಿತರು.

೬

ಪ್ರವಾಸಿಮಂದಿರವು ಸಾಕಷ್ಟು ದೊಡ್ಡದಿತ್ತಲ್ಲದೆ ಗಿಡಮರಗಳಿಂದ ಕೂಡಿ ಮನಸ್ಸಿಗೆ ಆಹ್ಲಾದಕರವಾದ ಭಾವನೆಯನ್ನು ತರುತ್ತಿತ್ತು. ಮಂತ್ರಿಗಳ ಊಟವಾದ ನಂತರ ಮಂತ್ರಿಗಳ ಕಾರ್ಯದರ್ಶಿಗೆ ಕರೀಮ ಒಳಗೆ ಹೋಗಿ ವಿಷಯವನ್ನು ತಿಳಿಸಿದನು. ನಮಗೆ ಚರ್ಚಿಸಲು

ಸಮಯವಿಲ್ಲ ಅದರ ಬಗ್ಗೆ ನಿಮ್ಮ ಅಧಿಕಾರಿಗಳ ಸಂಗಡ ಚರ್ಚಿಸಿರಿ ನಾವೀಗ ಮುಂದೆ ಹೋಗಬೇಕು ಎಂದು ನುಡಿದಾಗ, ಕರೀಮ ಬಹಳ ವಿನಯದಿಂದ, ಕೇವಲ ಹದಿನೈದು ನಿಮಿಷ ಸಮಯವನ್ನು ಕೇಳಿದಾಗ ಕಾರ್ಯದರ್ಶಿಗಳು ಒಪ್ಪಿಗೆ ನೀಡಿ ಇಷ್ಟೆಲ್ಲ ಜನರು ಒಳಗೆ ಬರಕೂಡದು ನಾಲ್ಕು ಜನರಷ್ಟೇ ಬನ್ನಿರೆಂದು ಹೇಳಿದಾಗ. ಜನರು ಒಪ್ಪಲಾರದೇ ಗದ್ದಲ ಮಾಡಲು ಪ್ರಾರಂಭಿಸಿದರು ಅದನ್ನು ತಿಳಿದ ಮಂತ್ರಿಗಳು ಆವರಣದಲ್ಲಿಯೇ ಚರ್ಚಿಸೋಣವೆಂದು ಹೇಳಿ ಅರ್ಜಿಯನ್ನು ಬರೆದು ಕೊಟ್ಟವರು ಬನ್ನಿರೆಂದು ಹೇಳಿದಾಗ, ಕರೀಮ ಹಾಗೂ ಮಧುಕರ ಹೋದರು. ಕಾರ್ಯದರ್ಶಿಗಳು ಅರ್ಜಿಯನ್ನು ಓದಿದರು. ಅವರ ಬಗ್ಗೆ ಮಂತ್ರಿಗಳು ನಗರ ಸಭೆಯ ಅಧ್ಯಕ್ಷರನ್ನು ಕೇಳಿದಾಗ ನಾವು ವಿದ್ಯುತ್ ಮಂಡಳಿಗೆ ಹಣವನ್ನು ತುಂಬಿಯಾಗಿದೆ ಆದರೆ ಇನ್ನೂ ಬಲ್ಬುಗಳನ್ನು ಹಾಕಿಲ್ಲ ಎಂದು ರೇವಣ್ಣ ನುಡಿದಾಗ, ಇಲ್ಲ ಅವರು ಸುಳ್ಳು ಹೇಳುತ್ತಿದ್ದಾರೆ ನಗರ ಸಭೆಯವರು ನಾಲ್ಕು ತಿಂಗಳಿನಿಂದ ಹಣವನ್ನು ಕಟ್ಟಿಲ್ಲ ಅವರು ಬಲ್ಬಿಗಾಗಿ ಕಟ್ಟಿದ ಹಣವನ್ನು ಬಿಲ್ಲಿಗೆ ಬದಲಾಯಿಸಿದ್ದೇವೆ. ಮತ್ತು ನೀವು ಹಣವನ್ನು ಕಟ್ಟಿರೆಂದು ನೋಟಿಸನ್ನು ಅದೇ ವಾರದಲ್ಲಿ ಕಳಿಸಿದ ದಾಖಲೆಗಳಿಲ್ಲಿವೆ ಸರ್ ಎಂದು ಮಧುಕರ ಒಂದು ಕಾಗದವನ್ನು ಕೊಡುವನು. ಈ ವಿಷಯ ನನಗೆ ಗೊತ್ತಿಲ್ಲ ಗೊತ್ತಿದ್ದರೆ ಅಂದೇ ನಾನು ವ್ಯವಸ್ಥೆ ಮಾಡುತ್ತಿದ್ದೆ. ಎಂದು ರೇವಣ್ಣ ನುಡಿದಾಗ, ಹೌದು ನಾಲ್ಕು ತಿಂಗಳಿಂದ ನೀವು ನಗರ ಸಭೆಗೆ ಹೋಗಿಲ್ಲವೆ ಎಂದು ಮಂತ್ರಿಗಳು ಕೇಳಿದಾಗ, ಹೋಗಿದ್ದೆ ಆದರೆ ನೋಡಲಿಲ್ಲ ಎಂದು ರೇವಣ್ಣ ನುಡಿದಾಗ, ಈ ತರಹದ ಬೇಜವಾಬ್ದಾರಿ ಕೆಲಸ ಮಾಡುವುದಕ್ಕಿಂತ ರಾಜಿನಾಮೆ ಕೊಟ್ಟು ಮನೆಯಲ್ಲಿ ಮಲಗಿಕೊಳ್ಳಿ ಎಂದು ಮಂತ್ರಿಗಳು ನುಡಿದರು. ಜನರೆಲ್ಲ ಹೋ ಎಂದು ನಗುವರು. ಜನತಾ ಮನೆಗಳನ್ನೇಕೆ ಕಟ್ಟಿಸಲಿಲ್ಲ ಎಂದು ಮಂತ್ರಿಗಳು ಕೇಳಿದಾಗ ಜಾಗೆಗಳನ್ನೆಲ್ಲ ಖರೀದಿಸಿಯಾಗಿದೆ. ಕೆಲಸವನ್ನು ಮಾಡಲು ಆಳುಗಳು ಸಿಗುತ್ತಿಲ್ಲ ಕೂಲಿಗಾರರೆಲ್ಲ ಸುಗ್ಗಿಯ ಸಮಯವಾದ್ದರಿಂದ ಹಳ್ಳಿಗೆ ಹೋಗಿದ್ದಾರೆ. ಬಂದನಂತರ ಪ್ರಾರಂಭಿಸುವೆವು

ಎಂದು ನಾಗನಗೌಡರು ನುಡಿಯಲು, ಅದೆಲ್ಲ ಸುಳ್ಳು ಕೆಲಸವಿಲ್ಲದೆ ನೂರಾರು ಕೆಲಸಗಾರರು ಸುಮ್ಮನೆ ತಿರುಗಾಡುತ್ತಿದ್ದಾರೆ ಅಲ್ಲದೆ ಜಾಗೆಗಳನ್ನ ಕರೀದಿಸಿ ಒಂದುವರೆವರ್ಷವಾಯ್ತು ಸುತ್ತಲಿನ ಊರುಗಳಲ್ಲಿ ಮನೆಗಳನ್ನು ಕಟ್ಟಿಸಿ ಜನರೆಲ್ಲ ವಾಸವಾಗಿದ್ದಾರೆ ಎಂದು ಸಂಗಪ್ಪಮಾಸ್ತರರು ನುಡಿಯಲು, ಏನ್ರಿ ಗೌಡ್ರೆ ಇದೆಲ್ಲ ಒಂದು ಕೆಲಸಮಾಡಿ ಮನೆಗಳನ್ನು ಕಟ್ಟಲಿಕ್ಕೆ ಆಳುಗಳೆಷ್ಟು ಬೇಕೆಂಬುದು ಅವರಿಗೆ ಹೇಳಿರಿ ಅವರು ಕರೆದು ತರುವರು ಎಂದು ಮಂತ್ರಿಗಳು ನುಡಿದಾಗ. ನಾವು ನಾಳೆಯಿಂದಲೇ ಕರೆದು ತರುವೆವು ಎಂದು ರಾಮು ಹೇಳುವನು. ಇನ್ನೂ ನೀರಿನ ಟ್ಯಾಂಕುಗಳ ಬಗ್ಗೆ ನೀವು ಆರಿಸಿದ ಸ್ಥಳಗಳು ಸರಿಯಿಲ್ಲವೆಂದು ಬರೆದಿದ್ದಾರೆ ಮತ್ತು ಅವರು ಹೊಸಬಡಾವಣೆಯಲ್ಲಿ ಹಾಗೂ ಮುಸ್ಲೀಮರ ಕೇರಿಗೂ ಹಾಗೂ ಹರಿಜನರ ಕೇರಿಯ ಮಧ್ಯವಾದರೆ ಎರಡು ಕೇರಿಗಳಿಗೆ ಅನುಕೂಲವಾಗುವುದು ಎಂದಿದ್ದಾರೆ, ಇದಕ್ಕೆ ನೀವೇನಂತಿರಿ ಎಂದು ಕುಮಾರಗೌಡರನ್ನು ಕೇಳಲು, ಯಾವ ಸ್ಥಳದಲ್ಲಿ ಆದರೆ ಏನು ಒಟ್ಟಿನ ಮೇಲೆ ಮಾಡಿದ ಕೆಲಸದಿಂದ ಸಾರ್ವಜನಿಕರಿಗೆ ಉಪಯೋಗವಾದರೆ ಸಾಕು ಎಂದು ನುಡಿದಾಗ, ಹೋಮುತ್ತಿನಂಥ ಮಾತು ಬಹುಶಃ ಇವತ್ತು ಸೂರ್ಯ ಪಶ್ಚಿಮದಲ್ಲೇನಾದರೂ ಉದಯಿಸಿದನಾ ? ಎಂದೊಬ್ಬನು ತನ್ನ ಪಕ್ಕ ಕುಳಿತ ಸಭಿಕನನ್ನು ಕೇಳಿದಾಗ ಹೋ ಎಂದು ಎಲ್ಲರೂ ನಕ್ಕರು.

ನಿಮ್ಮ ನಗರದ ಸಮಸ್ಯೆಗಳನ್ನು ಸರಿಯಾಗಿ ಮಾಡದೇ ಇದ್ದುದು ಬಹಳ ದೊಡ್ಡ ತಪ್ಪು ಅದಕ್ಕಾಗಿ ಸರಕಾರವು ಪ್ರತಿಯೊಂದು ನಗರ ಸಭೆಗೆ ಮುಖ್ಯ ಅಧಿಕಾರಿಗಳನ್ನು ನೇಮಿಸಿರುತ್ತದೆ. ಅವರು. ಈ ಕಾರ್ಯಗಳನ್ನು ನಮಗೆ ತಿಳಿಸಿಲ್ಲವಾದ್ದರಿಂದ ಅವರ ಮೇಲೆ ಕ್ರಮವನ್ನು ಕೈಕೊಳ್ಳಬೇಕಾಗುವುದು, ಆ ಕೆಲಸವನ್ನು ನಾನು ರಾಜಧಾನಿಗೆ ಹೋದನಂತರ ಮಾಡುವೆನು. ಈಗ ಈ ನಿಮ್ಮ ಕೆಲಸಗಳು ಆದಷ್ಟು ಬೇಗನೆ ಮುಗಿಯಬೇಕೆಂದರೆ ಈರ್ವರೂ ಸೇರಿಕೊಂಡು ಮಾಡಿದ ಒಳ್ಳೆಯದೆಂದು ನನ್ನ ವಿಚಾರವಿದೆ. ಅಲ್ಲದೆ ಈ ಅರ್ಜಿಯನ್ನು ಸಲ್ಲಿಸಿದ

ಕಾರ್ಖಾನೆ, ಹಾಗೂ ರೇವಣ್ಣ ಸೇರಿ ಜನತಾಮನೆಗಳನ್ನು ಕಟ್ಟಿಸಬೇಕು ಅವು ಒಂದೆರೆಡು ತಿಂಗಳಲ್ಲಿ ಮುಗಿಯಬೇಕು. ಅನಂತರ ಮಧುಕರ ಹಾಗೂ ಕುಮಾರಗೌಡರು ಸೇರಿಕೊಂಡು ನೀರಿನ ಟ್ಯಾಂಕಗಳನ್ನು ಕಟ್ಟಿಸುವ ವ್ಯವಸ್ಥೆಯನ್ನು ಮಾಡಬೇಕು ಎಂದು ನುಡಿದು. ನಿಮ್ಮಂಥಹ ಯುವಕರು ಮುಂದೆ ಬಂದಾಗ ಎಂಥಹ ಕೆಲಸಕಾರ್ಯಗಳನ್ನೂ ಮಾಡಲು ಸಾಧ್ಯವೆಂದು ಹೇಳಬಹುದು. ಸರಕಾರವು ಹಾಕಿಕೊಂಡ ಈ ಮಹಾನ್ ಕಾರ್ಯಗಳು ಕಾರ್ಯರೂಪಕ್ಕೆ ಬಂದರೆ ಮಾತ್ರ ಸರಕಾರವು ಜಾರಿಗೆ ತಂದದ್ದಕ್ಕೂ ಸಾರ್ಥಕವಾಗುವುದು. ಇಂದಿನದಾಗಲಿ ಹಿಂದಿನದಾಗಲಿ ಈ ಯುವಶಕ್ತಿ ಸಾಮಾನ್ಯವಾದುದಲ್ಲ, ನಮ್ಮ ದೇಶದ ಸ್ವಾತಂತ್ರ್ಯದ ಸಲುವಾಗಿ ಹೋರಾಡಿ ಮಡಿದವರಲ್ಲಿ ಯುವ ಶಕ್ತಿಯದೇ ಮೇಲುಗೈಯಿದೆ. ಚಂದ್ರಶೇಖರ್ ಅಜಾದ್, ಭಗತಸಿಂಗ್, ಸುಭಾಶಚಂದ್ರಭೋಸರಂತಹ ಯುವಶಕ್ತಿಯು ಇಂಗ್ಲೀಷರನ್ನೇ ಮಣ್ಣು ಮುಕ್ಕಿಸಿತು. ಅವರ ಶೌರ್ಯಕಂಡು ಇಂಗ್ಲೀಷರು ಬೇಗಾಗಿಹೋದರು. ಈ ಯುವಶಕ್ತಿಯ ಮುಂದೆ ಬೇರಾವ ಶಕ್ತಿಯ ಆಟವೂ ಸಾಗುವುದಿಲ್ಲ, ಈ ನಿಮ್ಮಶಕ್ತಿಹೇಗೆ ಕೆಲಸಮಾಡಿ ತೋರಿಸುವದೆಂದು ಕಾಯ್ದು ನೋಡೋಣ ಎಂದು ಹೇಳಿ ಈ ಸಮೂಹವನ್ನು ಬಿಳ್ಕೊಟ್ಟರು.

೭

ಜನೋಪಯೋಗಿ ಕಾರ್ಯಗಳನ್ನು ಮಾಡುತ್ತ ಸಂಗಪ್ಪಮಾಸ್ತರರು ರೂಪಿಸಿದ ಗುಂಪು ತನ್ನ ಪ್ರತಿಷ್ಠೆಯನ್ನು ನಗರದಲ್ಲಿ ಬೆಳಸಹತ್ತಿತು. ಅಲ್ಲದೆ ಈ ಕಾರ್ಯಗಳೂ ಇನ್ನು ಜನರಿಗೆ ತಲುಪುವ ಸಲುವಾಗಿ ಒಂದು ಚಿಕ್ಕಪತ್ರಿಕೆಯನ್ನು ತರುವ ವಿಚಾರಮಾಡಿಕೊಂಡು ಒಂದು ಕಾರ್ಯಾಲಯವನ್ನು ಸಂಗಪ್ಪಮಾಸ್ತರರ ಮನೆಯಲ್ಲೇ ಮಾಡಿದರು.

ಮುದ್ರಣಾಲಯಕ್ಕೆ ಬೇಕಾಗುವ ಮೊದಲಿನ ವಸ್ತುಗಳನ್ನು ಆನಂದ

ರಾಮು ಹಾಗೂ ಸಂಗಪ್ಪಮಾಸ್ತರರು ತ.ದರು. ಕಠೀನುನಿಗೂ ರಾಜೇಶನಿಗೂ ಅಚ್ಚುಗಳನ್ನು ಜೋಡಿಸಲು ಬ.ುತ್ತಿತ್ತು. ಸಂಗಪ್ಪ ಮಾಸ್ತರರು ಸರಕಾರದಿಂದ ಮನ್ನಣೆ ಪತ್ರವನ್ನು ತಂದರು. ಈ ಕೆಲಸ ವನ್ನು ಅದಷ್ಟು ಬೇಗನೆ ಮಾಡಬೇಕೆಂದು ಮಾಸ್ತರರು ಹೇಳಿದಾಗ ಕೇವಲ ಒಂದುವಾರದಲ್ಲಿ ಎಲ್ಲ ಕೆಲಸವನ್ನು ಮುಗಿಸಿಬಿಡೋಣವೆಂದು ಹೇಳಿದರು. ಅವರಂತೆ ಸಂಗಪ್ಪಮಾಸ್ತರರ ಹಳೆಯ ಮಾಳಿಗೆಯ ಮ.ನೆ ಯನ್ನೇ ಅಲ್ಲಲ್ಲಿ ರೀಪೇರಿ ಮಾಡಿ ಒಂದು ಹಂತಕ್ಕೆ ತಂದರು ಮೆಸಿನ್ ನನ್ನು ಸ್ವಾಮಿಯು ನಡೆಸುತ್ತಿದ್ದನು. ಆದರೂ ಒಬ್ಬ ಕೆಲಸಗಾರನನು ನೇಮಿಸಿಕೊಂಡಿದ್ದರು, ಪ್ರಕಟನೆಗೆ ಬೇಕಾಗುವ ಎಲ್ಲ ಸಿದ್ಧತೆಗಳು ನಡೆದವು.

೮

ಕಾಲೇಜವು ಪ್ರಾರಂಭವಾಗಿ ಆರೇಳು ತಿಂಗಳುಗಳು ಕಳೆದ.. ಶ್ರೀಮಂತ ವಿದ್ಯಾರ್ಥಿಗಳು ತಮ್ಮ ಸಿರಿತನದ ಪ್ರದರ್ಶನಕ್ಕಾಗಿ ದಿನಾಲು ಒಂದೊಂದು ತರಹದ ವಾಹನಗಳ ಮೇಲೆ ಬರುತ್ತಿದ್ದರೆ, ಕಾಮೇಶ ದೀಪಕರಂತಹ ವಿದ್ಯಾರ್ಥಿಗಳು ನವೀನತೆಯ ಪರಮಾವಧಿಯನ್ನು ಮೀರಿ ಹೋಗಿದ್ದರು. ಅವರು ಕಾಲೇಜಿಗೆ ವಿದ್ಯೆಯನ್ನು ಕಲಿಯಲು ಬರು ತ್ತಿರಲಿಲ್ಲ. ವಿದ್ಯಾರ್ಥಿ ಜೀವನದಲ್ಲಿ ಮೋಜುಮಾಡಿ ಕಾಲಹರಣ ಮಾಡಲೆಂದು ಬರುತ್ತಿದ್ದರು. ಇವರಿಗೆ ಲಕ್ಷ್ಮೀಯ ಬಲವಿತ್ತೆ ಹೊರತು ಸರಸ್ವತಿಯ ಬಲವು ಸ್ವಲ್ಪವೂ ಇರಲಿಲ್ಲ. ಸರಸ್ವತಿ ಹಾಗೂಲ ಕ್ಷ್ಮೀ ದೇವಿ ಈರ್ವರೂ ಒಂದಡೆ ಸೇರುವದಿಲ್ಲವೆಂಬ ನಾಣ್ನುಡಿಯಂತೆ ಕಾಮೇಶರಂತವರಿಗೆ ಅದು ಸಲ್ಲತಕ್ಕ ಮಾತು.

ಮಧುಕರನ ಸಂಗಡ ರಾಮು, ಆನಂದ, ಸಹ ನಡೆದುಕೊಂಡೇ ಬರುತ್ತಿದ್ದರು. ಈರ್ವರೂ ತಾವು ಎಷ್ಟೇ ಶ್ರೀಮಂತರಿದ್ದರೂ ಅದನ್ನು

ತೋರುಗೊಡದೆ ಹಣಕ್ಕೆ ಬೆಲೆಯನ್ನು ಕೊಡದೆ ಗುಣಕ್ಕೆ ಬೆಲೆಯನ್ನು ಕೊಟ್ಟುದಕ್ಕಾಗಿಯೋ ಮಧುಕರನ ಸಂಗವನ್ನು ಬಯಸಿ ಬಂದಿದ್ದರು. ಇವೆಲ್ಲಕ್ಕೂ ಕಾರಣ ಸಂಗಪ್ಪಮಾಸ್ತರರ ನೀತಿಬೋಧನೆ, ಸಮತಾ-ವಾದದ ಸನ್ಮಾರ್ಗವೇ ಕಾರಣವೆಂದು ಹೇಳಬಹುದು. ಆದರೆ ಮಧು ಸೋದರಮಾವನ ಆಶ್ರಯದಲ್ಲಿ ಬೆಳೆದನು. ಮಧುಕರ ಮೆಟ್ರಿಕ್ ಪರೀಕ್ಷೆಯಲ್ಲಿ ರಾಜ್ಯಕ್ಕೆ ಪ್ರಥಮನಾಗಿ ಬಂದನು. ಅವನ ಉನ್ನತ ಶಿಕ್ಷಣಕ್ಕಾಗಿ ಅನೇಕ ಸಂಘ-ಸಂಸ್ಥೆಗಳು ಮುಂದೆ ಬಂದವು ಅವನು ಕಲಿಯುವ ಕಾಲೇಜವೇ ಅವನಿಗೆ ಪುಸ್ತಕಗಳನ್ನು ಒದಗಿಸಿತು. ಮಧುಕರ ತನಗೆ ಬಂದ ಸ್ಕಾಲರ್‌ಶಿಪ್‌ನಲ್ಲಿ ಇನ್ನೂ ಹಣವನ್ನು ಉಳಿಸುತ್ತಿದ್ದನು, ತಾನು ಊರಿಗೆ ಹೋದಾಗ ಅತ್ತೆಗೂ ಹಾಗೂ ಮಾವನ ಏಕೈಕ ಪುತ್ರಿ ಮಂಜುಳಾಗೆ ಸೀರೆವಗೈರೆ ಒಯ್ಯುತ್ತಿದ್ದನು. ಮಧುಕರನೆಂದರೆ ಮಂಜುಳಾಗೆ ಎಲ್ಲಿಲ್ಲದ ಪ್ರೀತಿ, ಪ್ರೇಮ, ಆತನು ಊರಿಗೆ ಬರುವನೆಂಬ ಸುದ್ದಿ ತಿಳಿದರೆ ಸಾಕು ಅವನಿಗಿಷ್ಟವಾದ ತಿಂಡಿಗಳನ್ನು ಮಾಡಲು ಪ್ರಾರಂಭಿಸುತ್ತಿದ್ದಳು ಅವಳ ಈ ಕೆಲಸವನ್ನು ಕಂಡ ಅವಳ ತಂದೆ-ತಾಯಿಗಳು ಪೀಡಿಸಿ ನಕ್ಕು ನಲಿಯುತ್ತಿದ್ದರು. ಮಧುಕರ ಮಾವನಮನೆಗೆ ಬಂದರೆ ಮಂಜುಳಾ ಹೊರಗೆ ಬರುವದು ಕಷ್ಟವಾಗುತ್ತಿತ್ತು. ಆಕೆಯ ಗೆಳತಿಯರೆಲ್ಲರು ಏನೇ ಮಂಜುಳಾ ಹೊರಗೆ ಬಂದಿಲ್ಲವಲ್ಲೇ ಭಾವೀಪತಿಯ ಸಂಗತ ಎಂದು ಏನೆಲ್ಲ ಪೀಡಿಸುತ್ತಿದ್ದರು. ನೋಡು ಮಧು ನಿನ್ನಮಾವ ನಿನಗಾಗಿ ಬಹಳ ತ್ರಾಸ್ ಪಟ್ಟಿದಾನ ಅವನ ಮೇಲಿನ ಬಾರ ಕಡಿಮೆ ಆಗಬೇಕಾದರೆ ಅವನ ಮಗಳನ್ನು ಮಾಡಿಕೊಂಡ ಬಿಡು ಅವಳೂ ನೀನಂದ್ರೆ ಪ್ರಾಣಬಿಡುತಾಳೆ ಎಂದು ಕೆಲವೊಂದು ಹಿರಿಯರು ಅನ್ನುತ್ತಿದ್ದರು, ಅದೆಲ್ಲ ಬಿಟ್ಟು ಯಾವುದಾದ್ರು ನಗರದ ಹುಡುಗಿನ ಪ್ರೇಮ-ಗೀಮ ಅಂದುಕೊಂಡು ಗಂಟು ಹಾಕಿಕೊಂಡಿಯಾ ಮತ್ತೆ ಎಂದು ಕೆಲವರು ಅನ್ನುತ್ತಿದ್ದರು, ನೋಡಿ ನನಗೆ ದೇವರ ಮೇಲೆ ನಂಬಿಕೆಯಿಲ್ಲ ನನಗೆ ಸಾಕಿಸಲಹಿದವರೇ ದೇವರು ಎಲ್ಲಾ ನನ್ನ ಪಾಲಿಗೆ ಅವರೇ ಎಲ್ಲೋ ಒಂದುಕಡೆ ಬಿದ್ದು ಹಾಳಾಗಿ ಹೋಗಬೇಕಾಗಿದ್ದ

ಈ ಸಸಿಯನ್ನು ಜೋಪಾನಮಾಡಿ, ವಿಧ್ಯೆಬುದ್ಧಿಯೆರೆದು ಹೆಮ್ಮರವನ್ನಾಗಿ ಮಾಡಿದ್ದಾರೆ ಅಂಥವರ ಮಾತನ್ನು ಅದ್ಹೇಗೆ ಮೀರಲು ಸಾಧ್ಯ? ಯಜಮಾನರೆ ಅದು ಮಾನವಿಯತೆ ಅನಿಸಲಾರದು ಎಂದು ನುಡಿಯುತ್ತಿದ್ದನು.

ಆದರೆ ಮಂಜುಳಾನನ್ನು ತನ್ನ ಬಾಳ ಸಂಗಾತಿಯನ್ನಾಗಿ ಆರಿಸಲು ತನ್ನ ಮನಮಾತ್ರ ಒಪ್ಪುತ್ತಿರಲಿಲ್ಲ. ಮಂಜುಳಾ ಒಬ್ಬ ದೊಡ್ಡಮನೆತನದ ಸೊಸೆಯಾಗಿ ಬಾಳಬೇಕೆಂಬುದೆ ಆತನ ಮನದಿಚ್ಛೆಯಾಗಿತ್ತು. ಆದರ ವಿಚಾರವಾಗಿ ಸೋದರಮಾವನಿಗೆ ಹೇಳಿದಾಗ, ಅವರು ನೀವೀರ್ವರೂ ನನ್ನೆರೆಡು ಕಣ್ಣುಗಳಿದ್ದ ಹಾಗೇ ಒಂದಕ್ಕೆನಾದರೂ ತೊಂದರೆಯಾದರೆ ನನಗೆ ಸಹಿಸುವಷ್ಟು ಶಕ್ತಿನನ್ನಲಿಲ್ಲ, ನಿಮ್ಮಿಬ್ಬರ ಇಚ್ಛೆಯೇ ನನ್ನ ಇಚ್ಛೆ ಎಂದು ನುಡಿದಾಗ, ಮಧುಗೆ ಯಾವುದೇ ತೆರನಾದ ಉತ್ತರವಿರಲಿಲ್ಲ. ನಂತರ ಮಧು ನಿನ್ನ ವಿಚಾರವಾಗಿ ಸಂಗಪ್ಪಮಾಸ್ತರರು ಆಗಾಗ ಹೇಳುತ್ತಿರುತ್ತಾರೆ. ಯಾಕೆಂದರೆ ನಾನು ನಗರಕ್ಕೆ ನಿನ್ನನ್ನು ಕಳಿಸಬೇಕಾದರೆ ಸಂಗಪ್ಪಮಾಸ್ತರರಿಂದ ಭಾಷೆಯನ್ನು ತೆಗೆದುಕೊಂಡು ಕಳುಹಿಸಿದ್ದೇನೆ. ನನ್ನ ಮಾವನಿಗೆ ಕೊಟ್ಟ ತೊಂದರೆಯ ಸೇಡನ್ನು ತೀರಿಸಿಕೊಳ್ಳುವಂತಹ ಶಕ್ತಿಯನ್ನು ಅವನಿಗೆ ನೀವು ಕೊಡಬೇಕು ಎಂದು ಹೇಳಿದ್ದೆ. ಆದರೆ ಅದು ಈ ರೀತಿ ಮುಂದುವರಿಯುವುದು ಎಂದು ನಾನು ಗಮನಿಸಿರಲಿಲ್ಲ. ನಿನ್ನ ವಿಚಾರದಲ್ಲಿ ಚಕಾರವನ್ನು ಎತ್ತಲೂ ನನ್ನ ಮನಸು ಒಪ್ಪುವುದಿಲ್ಲ. ನೀನೀಗ 'ತಾನುರಿದು ಜಗಕೆಲ್ಲ ಬೆಳಕನ್ನು ನೀಡುವ ಜ್ಯೋತಿ' ನಿನ್ನ ಈ ಕ್ರಾಂತಿಕಾರಿಮಾರ್ಗ ಚಿರಾಯುವಾಗಲಿ, ಎಂದು ಬಾಯ್ತುಂಬ ಹೇಳಿದಾಗ, ಹೌದು ಮಾವ ಜನರೆಲ್ಲ ಹಾಸ್ಯ ಮಾಡುವರೆಂದು ನೀನೇನು ಮನಸ್ಸಿಗೆ ಹಚ್ಚಿಕೊಳ್ಳಬೇಡ, ನಿನ್ನ ಈ ಮಾರ್ಗ ಸುಗಮವಾಗಿ ಸಾಗಿ ನೀನದರಲ್ಲಿ ಯಶಸ್ವಿಯನ್ನು ಪಡೆದರೆ ಅದಕ್ಕಿಂತ ಹೆಚ್ಚಿನ ಭಾಗ್ಯ ನನಗೇನು ಬೇಡ. ನೀನು ಆರಿಸಿದವರನ್ನೇ ಮದುವೆಮಾಡಿಕೊಳ್ಳಿನಿ ಎಂದು ಮಂಜುಳಾ ದುಃಖಿಸುವಳು ನೀನು ದುಃಖಿಸಬೇಡ ಮಂಜುಳಾ ನನ್ನಿಂದ ಯಾರಿಗೂ ತೊಂದರೆಯಾಗಬಾರದು, ಯಾವ

ಗಳಿಗೆಯಲ್ಲಿ ಈ ಕ್ರಾಂತಿಕಾರಿ ಮನೋಭಾವನೆ ನನ್ನ ತಲೆಯಲ್ಲಿ ಸೇರಿದೆಯೋ ಅದರಿಂದ ಯಾರಿಗೂ ಸುಖವಿಲ್ಲ, ಎಲ್ಲರನ್ನೂ ಎದುರು ಹಾಕಿಕೊಳ್ಳ ಬೇಕಾಗಿದೆ. ಮಾಮಾ ನಾಳೆಯಿಂದ ನಾನು ನಗರಕ್ಕೆ ಹೋಗುವುದಿಲ್ಲ ಆ ಮಾರ್ಗವನ್ನು ನಾನು ಮರೆಯಬೇಕಾದರೆ ನಾನಿಲ್ಲೇ ಇರತೀನಿ ಎಂದು ಮಧು ದುಃಖದಿಂದ ನುಡಿದಾಗ, ಬೇಡ ಮಾಮಾ ನನಗೋ-ಸ್ಕರ ನಿಮ್ಮ ಅತ್ಯಮೌಲ್ಯವಾದ ಕ್ರಾಂತಿಕಾರಿ ಮಾರ್ಗವನ್ನು ಬಿಡ ಬೇಡಿ, ಸಮಾಜದಲ್ಲಿ ಆಗುತ್ತಿರುವ ಅನೀತಿ, ಅನ್ಯಾಯ ಹೋಗ-ಲಾಡಿಸುವ ಸಲುವಾಗಿ ನೀವು ದುಡಿಯಬೇಕು. ಗಂಡಸರ ಈ ಪವಿತ್ರ ವಾದ ಕೆಲಸಕ್ಕೆ ಹೆಗಲನ್ನು ಕೊಡುವದು ಭಾರತೀಯ ನಾರಿಯ ಧರ್ಮ. ನಾನು ಭಾರತೀಯನಾರಿ. ನೀವು ತುಳಿಯುವ ಹಾದಿ ಮುಳ್ಳಿನದಾಗಿರಲಿ, ಹೂವಿನದಾಗಿರಲಿ ಅದು ಯಶಸ್ವಿಯಾಗಲೆಂದು ನಾನು ಕೂಡಾ ಪ್ರಾರ್ಥಿಸುವೆನು ಎಂದು ಮಂಜುಳಾ ನುಡಿದಾಗ, ನೀನು ಬಯಸಿದ ಶುಭದಿನ ಆದಷ್ಟುಬೇಗ ಬರಲಿ ಎಂದು ಮಧುನ ಮಾವ ನುಡಿದರು. ಮಂಜುಳಾ ನಿಜವಾಗಿ ನೀನು ಬಹಳ ತಿಳಿದುಕೊಂಡಿ-ರುವಿ, ನಿನ್ನ ಮಾತಿನ ಅರ್ಥ ಬಲು ವಿಶಾಲ, ಕೇಳಿದರೆ ಮತ್ತೇ ಮತ್ತೇ ಕೇಳಿ ಅರ್ಥಿಸಿಕೊಳ್ಳಬೇಕೆನ್ನಿಸುತ್ತದೆ. ಎಂದು ಮಧು ನುಡಿ ದಾಗ, ಈರ್ವರೂ ಯಾರಿಗೇನು ಕಡಿಮೆಯಿಲ್ಲವೆಂದು ಸೋದರಮಾವ ನುಡಿದರು.

೬

ಮಧುಕರ ಮಾತ್ರ ಈ ಪ್ರೀತಿ ಪ್ರೇಮಗಳ ಭಾವನೆಗಳಿಗೆ ಬೆಲೆ ಯನ್ನು ಎಳ್ಳಷ್ಟೂ ಕೊಡುತ್ತಿರಲಿಲ್ಲ. ಮಧುಕರನಿಗೆ ಅನೇಕ ಹುಡುಗಿ ಯರು ಕಣಕಿದ್ದಲ್ಲದೆ ಆತನಿಂದ ಅವಮಾನವನ್ನು ಹೊಂದಿದ್ದರು. ಮಧುಕರನ ರೂಪಕ್ಕೆ ಮಾರುಹೋಗಿ ಇಲ್ಲವೆ ಆತನ ಚಾಣಾಕ್ಷ ತನಕ್ಕೆ ಮಾರುಹೋಗಿ ಅವನಲ್ಲಿ ಪ್ರೇಮಭಿಕ್ಷೆಯನ್ನು ಕೇಳಿದ್ದುಂಟು. ಆತನು ನಿರಾಕರಿಸಿದಾಗ ಆತನಮೇಲೆ ಅಪಪ್ರಚಾರವನ್ನು ಮಾಡಲು

ಪ್ರಾರಂಭಿಸಿದರು. ಆಗ ರಾಮು ಹಾಗೂ ಆನಂದ ಅಪಪ್ರಚಾರಕರ ಮೇಲೆ ಬಿರುಗಾಳಿಯಂತೆ ನುಗ್ಗಿ ಅವರನ್ನು ಸದೆಬಡೆದರು. ಮುಂದೆ ಆತನ ತಂಟೆಗೆ ಯಾರೂ ಬರದಂತೆ ಮಾಡಿದರು ಆದರೆ ದೀಪಕನ ಗುಂಪು ವೈಯಕ್ತಿಕ ದ್ವೇಶವನ್ನು ಸಾಧಿಸಿಕೊಳ್ಳುವ ಸಲುವಾಗಿ ಆತ-ನನ್ನು ಆಗಾಗ ಕೆಣಕುತ್ತಿತ್ತು. ಆದರೆ ರಾಮುನ ಗಡಸುತನ ಅವರಾರಲ್ಲೂ ಇರಲಿಲ್ಲವಾದ್ದರಿಂದ ಸುಮ್ಮನಾಗಿ ಬಿಡುತ್ತಿದ್ದರು. ಆನಂದ ಸಹ ಸಾಕಷ್ಟು ಶ್ರೀಮಂತವರ್ಗಕ್ಕೆ ಸೇರಿದವನಾಗಿದ್ದನು. ಸಂಗಪ್ಪ ಮಾಸ್ತರರು ಹಾಗೂ ಆನಂದನ ತಂದೆ ಕೂಡಿ ಓದಿದವರು, ಹೀಗಾಗಿ ನಗರದಲ್ಲಿರುವ ಸಂಗಪ್ಪಮಾಸ್ತರರ ಮೇಲೆ ತಮ್ಮ ಮಗನ ಭಾರವನ್ನು ಹಾಕಿದ್ದರು, ಹೀಗಾಗಿ ಮಧುಕರನಿಗೂ ಆನಂದನಿಗೂ ಸ್ನೇಹವು ಚಿಕ್ಕಂದಿನಿಂದಲೂ ಬೆಳೆದುಬಂದಿತು.

## ೧೦

ಅಂದು ಕಾಲೇಜಿಗೆ ರಾಮುಬಂದಿರಲಿಲ್ಲ. ಮಧುಕರನು ಉಪನ್ಯಾ-ಸಕರು ಗೈರುಹಾಜರಿಯೆಂದು ತಿಳಿದು ಹೂದೋಟದಲ್ಲಿ ಏನಾದರೂ ಮಾಡಿದರಾಯ್ತು ಎಂದು ತಿಳಿದು ಹೂದೋಟಕ್ಕೆ ಬಂದನು. ಹೂದೋಟ ದಲ್ಲಿ ಗಿಡಗಳ ಮಧ್ಯ ಕಸವು ಕಾಣಿಸಿತು. ಮಧುಕರ ಅದನ್ನು ತೆಗೆಯಹತ್ತಿದ್ದನು. ಕಸವನ್ನು ಕೀಳುತ್ತ ಗಿಡಗಳ ಸುತ್ತಲೂ ನೀರು ನಿಲ್ಲುವ ಹಾಗೆ ತಗ್ಗನ್ನು ಮಾಡುತ್ತಿದ್ದನು. ಅಷ್ಟರಲ್ಲಿ ಕಮಲ ಹಾಗೂ ಭಾಗ್ಯ ಅಲ್ಲಿಗೆ ಬಂದು ಅವನು ಮಾಡುವ ಕೆಲಸವನ್ನು ನೋಡುತ್ತ ನಿಂತರು. ನಂತರ ಮಧು ಎಲ್ಲ ಕಸವನ್ನು ಎತ್ತಿ ಕಸದ ಗುಂಡಿಗೆ ಹಾಕಲು ಮೇಲೇಳುತ್ತಿರುವಾಗ ಅವರನ್ನು ನೋಡಿ ಹೋ ಭಾಗ್ಯ ಯಾವಾಗ ಬಂದ್ರಿ ನಾ ನಿಮ್ಮನ್ನು ನೋಡಲಿಲ್ಲ, ಎನ್ನುತ್ತ ಕಸವನ್ನು ಕಸದ ಗುಂಡಿಗೆ ಒಗೆದು ಬರುವನು. ಆತನ ಮುಖದ ಮೇಲಿನ ಬೆವರನ್ನು ಮಣ್ಣಿನ ಕೈಯಿಂದಲೇ ಒರೆಯಿಸಿಕೊಂಡಿರಬಹು

ಪಾದಕಾರಣ ಮುಖದ ಕೆಲವೊಂದು ಭಾಗದಲ್ಲಿ ಮಣ್ಣು ಹತ್ತಿದೆ. ಆ ನಗುಮುಖದ ಸುಂದರನಿಗೆ ಈ ಕಲೆಗಳು ಮತ್ತಷ್ಟು ಮೆರಗನ್ನು ತಂದಿವೆ. ಕಮಲಾ ಆತನನ್ನೇ ತದೇಕ ದೃಷ್ಟಿಯಿಂದ ನೋಡುತ್ತಿ-ದ್ದಳು ಅಷ್ಟೊಂದು ಬೆವೆತಿದ್ದೀರಾ ಮುಖದ ತುಂಬೆಲ್ಲಾ ಮಣ್ಣು ಹತ್ತಿದೆ, ಇಷ್ಟೊಂದು ಕಷ್ಟವನ್ನು ನಿಮ್ಮ ಜಮೀನದಲ್ಲಿ ಮಾಡಿದ್ದರೆ ಹೊಟ್ಟೆತುಂಬಾ ಆಹಾರವಾದ್ರೂ ಸಿಗುತ್ತಿತ್ತು ಎಂದು ಭಾಗ್ಯ ನುಡಿದಾಗ, ಭೂಮಿಯೆಂದರೆ ಒಂದೇ, ಅಲ್ಲಿ ದುಡಿದರೆ ಉದರದ ಪೋಷಣೆಯಾಗಿ ನನ್ನ ಕುಟುಂಬದವರನ್ನು ಸಲುಹಬಹುದು. ಈ ಭೂಮಿಯ ಮೇಲೆ ದುಡಿದರೆ ಮನಸ್ಸಿಗೆ ನೆಮ್ಮದಿ ಸಿಗತದ ಈ ವನದಲ್ಲಿ ಬರುವ ಎಲ್ಲರಿಗೂ ಮನಸ್ಸಿಗೆ ಶಾಂತಿಸಿಗತದ, ಹೂವಿನ ಮಕರಂದ ಬಯಸುವ ನಾವು ಆ ಬಳ್ಳಿಯನ್ನು ಉತ್ತಮವಾಗಿ ಬೆಳೆಯುವಂತೆ ಮಾಡಬೇಕು ಆವಾಗಲೇ ಹೂವು ಸಾಕಷ್ಟು ಮಕ-ರಂದವನ್ನು ಬಿಡುವದು. ಎಂದು ಮಧು ನುಡಿದಾಗ, ಬರಿಸುಂದರ ಮಾತ್ರವಲ್ಲ ಮಾತಿನಲ್ಲಿ ಅದೆಷ್ಟು ಚಾಣಕ್ಷತೆಯಿದೆ ಎಂದು ಮನದಲ್ಲೆ ಅಂದುಕೊಂಡಳು.

ಅಷ್ಟರಲ್ಲಿ ಮಧು ನೀನೀಲ್ಲಿದ್ದಿಯಾ ಕ್ಲಾಸಲ್ಲಿ ಹುಡುಕಾಡಿದೆ ಸಿಗಲಿಲ್ಲ ಇಲ್ಲಿರಬಹುದಂತ ಇಲ್ಲಿಗೆ ಬಂದೆ ಇದೇನು ಮುಖದ ತುಂಬೆಲ್ಲ ಮಣ್ಣು ಎಂದು ವಿಮಲ ತನ್ನ ಕರವಸ್ತ್ರದಿಂದ ಆತನ ಮುಖವನ್ನು ಒರೆಸುವಳು. ಇರಲಿಬಿಡು ಆಮೇಲೆ ಮುಖತೊಳೆದುಕೊಂಡ್ರೆ ಹೋಗ್ಬಿಡುತ್ತೆ ಎಂದು ಮಧು ನುಡಿವನು. ಅಂದಹಾಗೆ ಮಧೂ ಇವರು ಭಾಗ್ಯ ಇವರು ಕಮಲ ಮೊದಲ ವರ್ಷದ ಪಿಯುಸಿಯಲ್ಲಿ ಓದುತ್ತಲಿದ್ದಾರೆ, ಎಂದು ಕಾಣುತ್ತೆ ಅಲ್ಲವೆ ಎಂದು ವಿಮಲ ನುಡಿದಾಗ, ಹೌದು ಇವರು ದೇಸಾಯರ ಮಗಳು ಭಾಗ್ಯ, ಇವರು ನಾಗನಗೌಡರ ಮಗಳು ಕಮಲಾ ಅಂತಾ, ಇವರು ವಿಮಲ ಅಂತ ಡಿಗ್ರಿಕ್ಲಾಸಿನಲ್ಲಿ ಓದುತ್ತಿದ್ದಾರೆ. ಎನ್ನಲೂ ವಿಮಲಾ ಈರ್ವರಿಗೆ ನಮಿಸಲು ಅವರಿ-ರ್ವರೂ ಪ್ರತಿನಮಿಸುವರು. ಮಧು ಮುಂದಿನ ತಿಂಗಳ ಚುನಾವಣೆ ಯಂತೆ ನೀನು ಮತ್ತೇ ಸ್ಪರ್ಧಿಸ್ತಿಯಾ ಎಂದು ವಿಮಲ ನುಡಿದಾಗ,

ಹೌದು ಎಲ್ಲರ ಒತ್ತಾಯದ ಮೇಲೆ ನಿಲ್ಲಬೇಕಾಯಿತು. ಎಂದು ಮಧು ನುಡಿಯಲು, ಹಿಂದಿನದೆಲ್ಲ ಮರೆತೆಯಾ, ಮೇಲಾಗಿ ಈ ಸಲವೂ ಅವರೇ ಸ್ಪರ್ಧಿಗಳು ಪ್ರತಿಸಲ ಅವರೇ ಸೋಲುವದರಿಂದ ಅದು ವಿಕೋಪಕ್ಕೆ ಹೋಗಿ ವಾತಾವರಣವೇ ಬದಲಾಗಿದ್ದು ನೆನಪಿ-ಲ್ಲವೆ, ರಾಜಕೀಯ ಶ್ರೀಮಂತರ ಸೊತ್ತು, ಬಡವನಿಗೆ ಸಿಲುಕದ ಹೂವದು. ನೀನು ಈ ಸಲ ಭಾಗವಹಿಸದೇ ರಾಮುಗಾದರೂ ಇಲ್ಲವೆ ಆನಂದರಿಗಾದರೂ ಸ್ಪರ್ಧಿಸಲು ಹೇಳು ಎಂದು ವಿಮಲ ನುಡಿದಾಗ, ಕಾಲೇಜ ಚುನಾವಣೆಯಲ್ಲಿ ಆರಿಸಿಬಂದವರಿಗೆ ಸಿರಿಸಂಪತ್ತೇನೂ ಸಿಗುವದಿಲ್ಲ. ಸೋತವರು ಅದನ್ನೇ ಬಂಡವಾಳವಾಗಿಟ್ಟುಕೊಂಡು ದ್ವೇಷವನ್ನು ಸಾಧಿಸಬಾರದು ಅದು ಅವಿವೇಕಿಗಳ ಲಕ್ಷಣ, ಚುನಾವಣೆಯಲ್ಲಿ ಭಾಗವಹಿಸುವದು ನಮ್ಮ ಹಕ್ಕು ನಮ್ಮ ಹಕ್ಕುಗಳನ್ನು ಕಸಿದುಕೊಳ್ಳುವ ಹಕ್ಕು ಯಾರಿಗೂ ಇಲ್ಲವೆಂದು ಕಮಲಾ ಹೇಳಿದಾಗ, ಬಾಯಿಂದ ನುಡಿದಷ್ಟು ಸುಲಭವಲ್ಲ ಕಮಲ ಈ ಕೆಲಸ, ನೀವಿನ್ನು ಹೊಸಬರು. ಹಿಂದಿನದನ್ನು ನೆನೆಯಿಸಿಕೊಂಡರೆ ಮೈಯಲ್ಲ ಉರಿದು ಬೀಳುತ್ತದೆ. ಈ ಚುನಾವಣೆ ಕಾಲೇಜದಲ್ಲಿ ನಡೆದರೂ ಅದು ವಿಕೋಪಕ್ಕೆ ಹೋಗಿ ನಗರದ ವಾತಾವರಣವೇ ಬದಲಾಗಿದ್ದು ನಿಮಗೂ ನೆನಪಿರಬಹುದು. ಎಂದು ವಿಮಲಾ ನುಡಿದಾಗ, ಅದೇನೆ ಆಗಲಿ ಮಧು ನೀವು ಚುನಾವಣಾ ಕಣಕ್ಕೆ ಇಳಿಯಿರಿ, ವಿದ್ಯಾರ್ಥಿನಿಯರ ಪರವಾಗಿ ನಿಮ್ಮ ಗುಂಪಿನಿಂದ ಕಮಲಾ ನಿಲ್ಲುವಳು ಎಂದು ಭಾಗ್ಯ ನುಡಿಯಲು. ಕಾಲೇಜ ಗಂಟೆಬಾರಿಸುವದು. ಅಷ್ಟರಲ್ಲಿ ಆನಂದ ಅಲ್ಲಿಗೆ ಬರುವನು. ಆಗ ಕಮಲಾ ನಮ್ಮ ಗುಂಪು ಎಂಥದು ಎಂಬುದು ನಿಮಗೆ ತಿಳಿದಿರಬಹುದು, ನಮ್ಮಲ್ಲಿ ಮತೀಯ, ವರ್ಗದ ಭೇದಭಾವಗಳಿಲ್ಲ. ಅಲ್ಲದೆ ನಮ್ಮ ಗುಂಪು ಕಾಲೇಜನಲ್ಲಿ ಅಷ್ಟೇ ಅವರನ್ನು ಪ್ರತಿಸ್ಪರ್ಧಿಯೆಂದು ಭಾವಿಸಿಲ್ಲ, ಊರಲ್ಲಿಯು ಸಹ ಅವರೇ ನಮ್ಮ ಸ್ಪರ್ಧಿಗಳು ಎಂಬುದು ನಿಮಗೆ ತಿಳಿದಿರಬಹುದು. ನೀವು ನಮ್ಮ ಸಂಗಾತಿಗಳಾಗಿ ಬಹಳ ತೊಂದರೆಗಳನ್ನು ಅನುಭವಿಸಬೇಕಾಗುವದು. ನಿಮ್ಮ ಮನೆಯವರಿಂದ ಅಷ್ಟತಾ ತೊಂದರೆಗಳನ್ನು ಪಡೆಯು

ಬೇಕಾಗುವುದು. ಆದ್ದರಿಂದ ನೀವು ದೀರ್ಘವಾಗಿ ಆಲೋಚಿಸಿರಿ. ಎಂದು ಆನಂದ ನುಡಿದನು.

ನಾವು ಸುಮಾರು ನಾಲ್ಕಾರು ತಿಂಗಳಿಂದ ವಿಚಾರವನ್ನು ಮಾಡಿ ಈ ತೀರ್ಮಾನಕ್ಕೆ ಬಂದಿದ್ದೇವೆ. ಇಂದು ಕಣದಲ್ಲಿ ನನ್ನ ಸಹೋದರನ ಗುಂಪು ವಿರೋಧವಿರಬಹುದು ಆದು ನನಗೂ ಕೂಡಾ ವಿರೋಧದ ಗುಂಪು. ಬಂಧುತ್ವ ಮನೆಯಲ್ಲಿ. ನಿಮ್ಮ ಜೊತೆ ನಾನು ಸೇರಿದಾಗ ನನಗೂ ವಿರೋಧಿ. ನಿಮ್ಮ ಸ್ನೇಹವನ್ನು ಬಯಸಿ ಬಂದಿದ್ದೇವೆ ನೀವು ದಯ-ವಿಟ್ಟು ನಮ್ಮನ್ನು ನಂಬಿ, ನೀವಿಟ್ಟಿರುವ ನಂಬಿಗೆಗೆ ದ್ರೋಹ ಬಗೆಯುವುದಿಲ್ಲವೆಂದು ಹೆತ್ತತಾಯಿಯ ಮೇಲೆ ಆಣೆಮಾಡಿ ಹೇಳು-ವೆನು ಎಂದು ಕಮಲ ಅತೀ ಉದ್ವೇಗದಿಂದ ಹೇಳಲು, ಕಮಲಾ ಹಾಗೆಲ್ಲ ನುಡಿಯಬಾರದು. ಬಿಡ್ತು ಅನ್ನು ತಾಯಿಯೆಂಬ ಪವಿತ್ರ ಬಂಧು ಬೇರೊಂದಿಲ್ಲ ಆದನ್ನು ಅಷ್ಟೊಂದು ಹಗುರವಾಗಿ ಕಾಣ-ಬಾರದು, ನಿಮ್ಮ ಇಷ್ಟದಂತೆಯೇ ಆಗಲಿ ನಮ್ಮ ಗುಂಪಿನಲ್ಲಿದ್ದು ಒಳೆಯ ಕಾರ್ಯಕರ್ತರಾಗಿರೆಂದು ಮಧು ಹೇಳುವನು. ಅಷ್ಟರಲ್ಲಿ ಗಂಟೆ ಬಾರಿಸಲು ಎಲ್ಲರೂ ಸೇರಿ ತರಗತಿಗೆ ಹೋಗುವರು.

## ೧೧

ನಾಗನಗೌಡರಿಗೆ ಮಧುಕರನ ಮೇಲಿನ ಕ್ರೋಧವು ಇನ್ನೂ ಬೆಳೆಯುತ್ತಲೇ ನಡೆಯಿತು. ಮಧುಕರನ ಸಂಗಡ ಇರುವ ಗುಂಪಿನವರ ಹಿರಿಯರನ್ನು ಕಂಡು, ಮಧುಕರನ ಸಂಗವನ್ನು ಬಿಡಲು ಹೇಳಿ ಹೇಳಿ ಸೋತು ಹೋದನು. ಈ ಗುಂಪಿನ ಹುಡುಗರು ಸಹ ಹಿರಿಯರ ಮಾತಿಗೆ ಸರಿಯಾಗಿ ಉತ್ತರ ಹೇಳಿ ಮಧುಕರನ ಪ್ರತಿಷ್ಠೆಯನ್ನು ಹೆಚ್ಚಿಸಿದ್ದರು. ಆನಂದನ ತಂದೆಯು ಹತ್ತಿರ ಹೋದ ನಾಗನಗೌಡರು ಅವಮಾನಹೊಂದಿ ಮರಳಿದ್ದರು. ಅಲ್ಲದೆ ಕಾಲೇಜ-ದಲ್ಲಿಯೂ ಸಹ ಕಳೆದ ಎರಡು ಚುನಾವಣೆಯಲ್ಲಿ ಮಧುಕರನ

ಗುಂಪು ಪ್ರಚಂಡ ಬಹುಮತದಿಂದ ಆರಿಸಿಬಂದಿತ್ತು. ಈ ವರ್ಷ ಮಾತ್ರ ತನ್ನ ಮಗಳಾದ ಕಮಲಾ ಸಹ ಆತನ ಗುಂಪನ್ನು ಸೇರಿ ಜಯಬೇರಿಯನ್ನು ಹೊಡೆದಿದ್ದರಿಂದ ಮತ್ತಷ್ಟು ರೋಷವು ಬಂದು ಕಮಲಳನನ್ನು ತಮ್ಮ ಮನಸ್ಸಿಗೆ ಬಂದಂತೆ ಬಯ್ದುದ್ದಲ್ಲದೆ,ಅದರ ವಿಷಯವಾಗಿ ದೀಪಕ ಕಮಲಳನ್ನು ಹೊಡೆದರೂ ಅವರು ದೀಪಕ ನಿಗೆ ಏನೂ ಅನ್ನಲಿಲ್ಲ. ಹೀಗೆ ಮಧುಕರನಿಂದ ತಮಗಾಗುತ್ತಿರುವ ತೊಂದರೆಯನ್ನು ಹೇಗಾದರೂ ಮಾಡಿ ತಪ್ಪಿಸಬೇಕೆಂಬ ವಿಚಾರದಲ್ಲಿದ್ದರು. ಕಮಲ ಸಹ ದೀಪಕನಿಗೆ ಎಳ್ಳಷ್ಟೂ ಹೆದರುತ್ತಿರಲಿಲ್ಲ. ನಗರದಲ್ಲಿ ಅವನಿಂದ ನಡೆಯುವ ಹೀನಕೃತ್ಯಗಳನ್ನು ಹೇಳಿ ಅವನನ್ನು ಅವಮಾನ ಪಡಿಸುತ್ತಿದ್ದಳು. ಮಧುಕರನ ಗುಂಪು ಚುನಾವಣೆಯಲ್ಲಿ ಯಶಸ್ವಿ ಯನ್ನು ಹೊಂದಿದಾಗ ಆತನ ಗುಂಪಿನ ಮೇಲೆ ನಾಲ್ಕಾರು ಜನ ರೌಡಿಗಳನ್ನು ಬಿಟ್ಟು ಅವರನ್ನು ಕೆಣಕಲು ದೀಪಕ ಹೇಳಿದ್ದನ್ನು ಅದು ಸಾಧ್ಯವಾಗಲಿಲ್ಲ. ಅನಂತರ ಅಲ್ಲಿಯೇ ಕಾಲೇಜ ಆವರಣದಲ್ಲಿ ನೆರದ ಗುಂಪಿನ ಮಧ್ಯವಿದ್ದ ಹುಡುಗಿಯರನ್ನು ಕೆಣಕಿ ಗಲಾಟೆಗೆ ಆಸ್ಪದಮಾಡಿದರು. ಅವರು ಯಾರೆಂಬುದು ಯಾರಿಗೂ ತಿಳಿದಿರಲಿಲ್ಲ. ಅವರನ್ನು ಹಿಡಿದು ಯಾರೆಂದು ಕೇಳಲು, ಮಧುಕರ ನಮಗೆ ಈ ತರಹ ಮಾಡಲು ಹೇಳಿರುವನೆಂದು ಹೇಳಿದರು. ಅದನ್ನು ತಿಳಿದು ಮಧುಕರನ ಗುಂಪು ಅವರನ್ನು ಸರಿಯಾಗಿ ನಾದಿದಾಗ, ಅವರಿಂದ ನಿಜವಾದ ವಿಷಯ ತಿಳಿದಾಗ, ದೀಪಕನನ್ನು ಮುಖ್ಯ ಉಪನ್ಯಾಸಕರು ಕರೆದು ಛೀಮಾರಿ ಹಾಕಿ ಇದೇ ತರಹದ ಪ್ರಸಂಗ ಮುಂದೆನಾದರೂ ಇಲ್ಲಿ ನಡೆದರೆ ಮುಂದಿನ ನಿನ್ನ ಜೀವನದ ಮೇಲೆ ನೀನೇ ಕಲ್ಲು ಹಾಕಿಕೊಳ್ಳುವಿ ಎಂದು ಗದರಿಸಿ ಕಳಿಸಿದರು. ದೀಪಕ ಹಾಗೂ ಕಾಮೇಶರಿಗೆ ಬಹಳ ಅವಮಾನವಾಯಿತು. ಈ ಸೇಡನ್ನು ಹೇಗಾದರೂ ಮಾಡಿ ತೀರಿಸಿಕೊಳ್ಳಬೇಕೆಂದು ಹೊಂಚು ಹಾಕುತ್ತಿದ್ದರು.

೧೨

ಸಂಗಪ್ಪಮಾಸ್ತರರ ಬಹುದಿನಗಳ ಬಯಕೆಯಿಡೇರುವ ಸಮಯ ಒದಗಿಬಂದಿದೆ. ತಮ್ಮ ಬಹುದಿನಗಳ ಸತತ ಪ್ರಯತ್ನದಿಂದ ಅನೇಕ

ಸಕ್ರಿಯ ಕಾರ್ಯಕರ್ತರು ಮಹತ್ತರವಾದ ಧ್ಯೆಯ-ದೊರಣೆಯನ್ನು ಹೊಂದಿ ಈ ಯುವಶಕ್ತಿಯು ಎಂಥ ಕಷ್ಟಗಳು ಬಂದರೂ ಅದನ್ನು ಹೆದರಿಸಿ ಮುಂದೆ ಸಾಗಿ ಹೊಸ ಮಾರ್ಗವನ್ನ ಹಿಡಿದು, ನವೀನ ಸಮಾಜದತ್ತ ತಮ್ಮ ಒಲವನ್ನು ತೋರಿಸಲು ಮುಂದೆಬಂದಿರುವರು. ಶ್ರಮಜೀವಿಗಳ ಕುಂದು ಕೊರತೆಗಳನ್ನು ಅರ್ಥಮಾಡಿಕೊಂಡು ಅವರ ಉನ್ನತಿಗಾಗಿ ದುಡಿಯಲು ತಯಾರಾಗಿದೆ. ಮಾನವನ ಪರಿಶುದ್ಧವಾದ ಮನಸ್ಸನ್ನು ಕ್ರೂರಯಾತನೆಯ ವಿಭಜನೆಗೆ ಗುರಿಮಾಡಿದ ಈ ಹೊಲಸು ಸ್ವಾರ್ಥ ಸಮಾಜವನ್ನು ನಿರ್ಮೂಲನ ಮಾಡಿ, ಹೊಸಸಮಾಜವನ್ನು ಸ್ಥಾಪಿಸಲು ಮುಂದೆ ಬಂದಿದೆ. ಮಾನವರೆಲ್ಲರೂ ಸರಿಸಮಾನರು ಮೇಲು ಕೀಳೆಂಬ ಬೇದಭಾವವಿಲ್ಲ, ಎಂಬ ಮಹತ್ತರವಾದ ವಾದ-ವನ್ನು ಜನರೆದುರು ಸಾರಿ ಸಾರಿಹೇಳಿ ಜನರನ್ನು ಮುಕ್ತಗೊಳಿಸುವ ಸಲುವಾಗಿ, ಒಂದು ಪತ್ರಿಕೆಯನ್ನು ಸ್ಥಾಪಿಸುವ ಈ ಮಹಾಶುಭದಿನ ದಂದು ನಗರದಲ್ಲಿ ವಿಧಾನಸಭೆಯ ಸದಸ್ಯರು, ವಿವಿಧ ಪತ್ರಿಕೆಗಳ ಸಂಪಾದಕರೂ ಹಾಗೂ ಮಂತ್ರಿಗಳೂ ಬಂದಿದ್ದಾರೆ. ನಗರದ ಮಹಾ ಜನತೆಯು ಸಹ ಈ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗ ವಹಿಸಿದೆ

ಪತ್ರಿಕೆಯ ಸಂಪಾದಕರಾದ ಸಂಗಪ್ಪಮಾಸ್ತರರು ಪತ್ರಿಕೆಯ ಬಗ್ಗೆ ಮಾತನಾಡುತ್ತ ಪ್ರಜಾಪ್ರಭುತ್ವದ ದೇಶಗಳಲ್ಲಿ ಪತ್ರಿಕೆಗಳಿಗೆ ಮಹತ್ತರ ವಾದ ಪಾತ್ರವಿದೆ. ಪತ್ರಿಕೆಗಳು ನಾಗರಿಕರ ಹಾಗೂ ನಾಗರಿಕರ-ರನ್ನಾಳುವ ಜನರ ಜೀವಾಳ. ಸರಕಾರವು ಜನಪ್ರಗತಿಪರ ಕಾರ್ಯ ಕಲಾಪಗಳನ್ನು ಎಷ್ಟರಮಟ್ಟಿಗೆ ಕಾರ್ಯರೂಪಕ್ಕೆ ತಂದಿದೆ. ಎಂದು ನಮಗೆ ತಿಳಿಯಬೇಕಾದರೆ ಪತ್ರಿಕೆಳ ಮುಖಾಂತರವೇ ಸರಕಾರದ ನಿಷ್ಠೆಯು ಆಡಳಿತವನ್ನಾಗಲಿ, ದುರಾಡಳಿತವನ್ನಾಗಲಿ ಬಹಿರಂಗ ಪಡಿಸುವ ವೆಂದರೆ ಪತ್ರಿಕೆಗಳೇ. ಪತ್ರಿಕೆಗಳು ಬಹಳ ನಿಷ್ಠೆಯಿಂದ ಕೆಲಸವನ್ನು ಮಾಡಬೇಕು. ಅವು ಯಾವ ವ್ಯಕ್ತಿಯ ಸರಕಾರದ ಪರವಾಗಿರದೇ ನ್ಯಾಯದ ಪರವಾಗಿರಬೇಕು. ನಮ್ಮ ದೇಶದಲ್ಲಿ ನೂರಕ್ಕೆ ಎಂಬತ್ತ ರಷ್ಟು ಪತ್ರಿಕೆಗಳು ಸರಕಾರದ ಪರವಾಗಿಯೇ ಕೆಲಸವನ್ನು ಮಾಡು

ತ್ತವೆ. ಸರಕಾರ ನ್ಯಾಯನೀತಿಯಿಂದ ಸಾಗುತ್ತಿದ್ದರೆ ಪರವಾಯಿಲ್ಲ, ಅದು ಅನ್ಯಾಯದತ್ತ ಸಾಗುತ್ತಿದ್ದರೆ ಅದನ್ನು ಸರಿಯಾಗಿ ಜನರಿಗೆ ತಿಳಿಯುವಂತೆ ಪ್ರಕಟಿಸಿ ತನ್ನ ಹೊಣೆಯನ್ನು ಉಳಿಸಿಕೊಳ್ಳಬೇಕು. ಆಗಲು ಕೂಡಾ ಸರಕಾರವನ್ನು ಬೆಂಬಲಿಸಿ ಬರೆದರೆ ಅವು ಇಪ್ಪೊ ಸತ್ತಂತೆ. ಅವು ತಮ್ಮ ಬೆಲೆಯನು ಕಳೆದುಕೊಂಡು ಪ್ರಕಟವಾಗು ವಂತಹವು, ಅಲ್ಲದೆ ಆ ಪತ್ರಿಕೆಗಳು 'ಸಾರ್ವಜನಿಕರ ಹಿತಕ್ಕಾಗಿ ಬರದೇ ತಮ್ಮ ಉದರದ ಪೋಷಣೆ ಸಲುವಾಗಿ ಬರುತ್ತವೆ ಎಂದು ತಿಳಿದುಕೊಳ್ಳಬಹುದು. ಆದರೆ ಈ "ಹೊಂಬೆಳಕು" ಮಾತ್ರ ನ್ಯಾಯ ನೀತಿ, ನಿಷ್ಟೆಯಿಂದ. ಬಡಜನರ, ಶ್ರಮಜೀವಿಗಳ ಕಲ್ಯಾಣದ ಸಲುವಾಗಿ ದುಡಿಯುವ ಪತ್ರಿಕೆ. ಶ್ರಮಜೀವಿಗಳ ದಾರಿದೀಪವಾಗಿ, ಸಮಾಜದ ದುಷ್ಕರನ್ನು ಬಗ್ಗುಬಡಿಯುವ ಸಲುವಾಗಿ ತನ್ನೆಲ್ಲ ಶಕ್ತಿಯನ್ನು ಬಳಸಿ ಮುಂದುವರಿಯುವ ಪತ್ರಿಕೆ ಕಾಳಸಂತೇಕೋರರ ಸಮಾಜಘಾತುಕರ ಕಾರ್ಗತ್ತಲೇಯಲ್ಲಿ ಹೊಂಬೆಳಕು ಹೊರಬರಲಿದೆ. ಮಾನವರೆಲ್ಲರೂ ಸಮಾನರು ಎಂಬುವದನ್ನು ಮರೆತು ಒಂದು ನೀಚಬುದ್ಧಿಯುಳ್ಳ ಗುಂಪು ತನ್ನ ಸ್ವಾರ್ಥ ಸಾಧನೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ಜಾತಿ, ಮತಗಳನ್ನು ನಿರ್ಮಿಸಿ, ನಮ್ಮ ನಮ್ಮಲ್ಲಿ ಗುಂಪುಗಳನ್ನು ವಿಂಗಡಿಸಿ ಗರ್ಷಣೆಗಳಾಗಲು ಅವಕಾಶಮಾಡಿಕೊಂಡಿರುವ, ದುಷ್ಟ ಶಕ್ತಿಗಳನ್ನು ನಿರ್ಮೂಲನಮಾಡಿ, ಮಾನವನ ಆತ್ಮವನ್ನು ಕ್ರೂರ ಯಾತನೆಯ ಜಾಲದಿಂದ ಮುಕ್ತಗೊಳಿಸಬೇಕಾಗಿದೆ. ಮಾನವೀಯ-ತೆಯನ್ನು ಕ್ರಾಂತಿಯಿಂದ ಬೇರ್ಪಡಿಸಿದಲ್ಲಿ ಅದು ನೈಜ ಮಾನವೀಯ-ತೆಯಾಗುವದು, ಅಂತೆಯೇ ಕ್ರಾಂತಿಯನ್ನು ಮಾನವೀಯತೆಯಿಂದ ಬೇರ್ಪಡಿಸಿದಲ್ಲಿ ಅದು ನೈಜ ಕ್ರಾಂತಿಯು ಆಗದು. ಇದನ್ನೇ ಅನೇಕ ಬುದ್ಧಿಜೀವಿಗಳು "ಸಮಾಜವಾದ" ವೆಂದು ಹೇಳಿರುವರು. ಮಾನವನ ಹೃದಯಕ್ಕೆ ಪ್ರೆಮವನ್ನು ತರಬೇಕು ಭೂಮಿಯ ಮೇಲಿನ ಸಕಲ ಜೀವಿಗಳು ಸಮಾನ. ಸಕಲ ಶ್ರಮಜೀವಿಗಳ ನಂದಾದೀಪವಾಗಿ ಹೊರಬಂದಿದೆ. ಇಂಥಹ ಸತ್ಯದ ಹೊಸದಾರಿಯಲ್ಲಿ ಈ ಪತ್ರಿಕೆ ತಮ್ಮೆಲ್ಲರ ಸೇವೆಯನ್ನು ಬಯಸಿ ಒಳ್ಳೆಯ ಮನೋಭಾವನೆಯನ್ನು

ಹೊಂದಿ ಬೆಳಗಲಿದೆ. ಇದಕ್ಕೆ ತಮ್ಮೆಲ್ಲರ ಪ್ರೀತಿ, ಪ್ರೇಮ ಸಹಕಾರ ಮುಖ್ಯವೆಂದು ಹೇಳಿದರು.

ಪತ್ರಿಕೆಯನ್ನು ಬಿಡುಗಡೆ ಮಾಡಿದ ಮಂತ್ರಿಗಳು ಮಾತನಾಡುತ್ತ ನಗರದ ಪ್ರಮುಖರೇ ಹಾಗೂ ಪತ್ರಿಕೆಯವರೇ ಮತ್ತು ನನ್ನ ನಗರದ ಬಂಧುಗಳೇ, ನಮ್ಮ ದೇಶದಲ್ಲಿ ಪತ್ರಿಕೆಯ ಪಾತ್ರವೆಷ್ಟು ಮುಖ್ಯ ವೆಂಬುದು ಹೇಳಿದ್ದಾರೆ ಅದರ ಬಗ್ಗೆ ನಾನು ಹೆಚ್ಚಿಗೇನು ಹೇಳಲಾರೆ, ನನಗೀಗ ಮುಂದೆ ಹೋಗುವುದಿದೆ ಎಂದು ಗಡಿಯಾರವನ್ನು ನೋಡುತ್ತ, ನಾವೆಲ್ಲರೂ ಸ್ವತಂತ್ರ ಭಾರತದ ಪ್ರಜೆಗಳು ನಮ್ಮ ದೇಶದ ಪ್ರಜೆಗೆ ನಾನಾರೀತಿಯ ಹಕ್ಕುಗಳನ್ನು ಒದಗಿಸಿದೆ. ಅದರಲ್ಲಿ ಪತ್ರಿಕಾ-ಸ್ವಾತಂತ್ರ್ಯವೂ ಒಂದು. ಇದು ಬಲು ಮುಖ್ಯವಾದ ವಿಷೇಶಪಾತ್ರ ವನ್ನು ಹೊಂದಿದೆ. ಜನರ ಹಾಗೂ ಸರ್ಕಾರದ ಅಭಿಪ್ರಾಯಗಳನ್ನು ಒಬ್ಬರಿಂದೊಬ್ಬರಿಗೆ ತಿಳಿಯಪಡಿಸುವ ಅಂಚೆಯಿದ್ದಹಾಗೆ. ಮೊನ್ನೆ ನಡೆದ ಅಧಿವೇಶನದಲ್ಲಿ ಅನೇಕತರಹದಿಂದ ವಾದವಿವಾದಗಳು ನಡೆದು ಮತ್ತಷ್ಟು ಹಕ್ಕುಗಳನ್ನು ಜನರಿಗೆ ಒದಗಿಸಿ ಕೊಟ್ಟಿದ್ದೇವೆ. ಎಂದು ನುಡಿದು, ಮತ್ತೊಮ್ಮೆ ಗಡಿಯಾರವನ್ನು ನೋಡಿಕೊಂಡು, ನನಗೆ ಮಾತನಾಡಲು ಸಮಯವಿಲ್ಲ ಎಂದು ಹೇಳಿ ಕೂಡ್ರುವರು. ನಂತರ ರೇವಣ್ಣ ನವರು ಅತಿಥಿಗಳಾಗಿ ಮಾತನಾಡಿದರು ನಂತರ ಆನಂದನಿಂದ ವಂದನಾರ್ಪಣೆಯಾಯಿತು.

ಮರುದಿನ ಈ ಪತ್ರಿಕೆಯನ್ನು ಕುರಿತು ಅನೇಕ ಪತ್ರಿಕೆಗಳು ಶುಭವನ್ನು ಕೋರಿ ಬರೆದಿದ್ದರು. ಈ ಪತ್ರಿಕೆಯ "ಓದುಗನ ಕೊರತೆ" ಹಾಗೂ "ಓದುಗನ ಅಭಿಪ್ರಾಯ" ಭಾಗಗಳ ಬಗ್ಗೆ ಅನೇಕರು ಪ್ರಶ್ನಿಸಿ ಪ್ರಶಂಸಿದ್ದರು. ಮತ್ತೆ ಕೆಲವೊಂದು ಪತ್ರಿಕೆಗಳು ಹೊಂಬೆಳಕು ತನ್ನ ಉನ್ನತವಾದ ಉದ್ದೇಶದಿಂದ ಹೊಂದಿ ಜನರ ಪ್ರಾಣಪಕ್ಷಿ ಯಾಗಲಿ, ಸಂಪಾದಕೀಯವನ್ನು ಓದಿ ನಾವೀಲೋಕದಲ್ಲಿ ಇದ್ದೇವೆಯೋ ಇಲ್ಲವೋ ಎಂದು ಬಾಸವಾಯಿತೆಂದು ಬರೆದಿದ್ದರು. ಆದರೆ ನಾಗನ ಗೌಡರಂತಹ ಮೂರ್ಖರು ಓದಿ ಅರ್ಥವಾಗದೆ ನಕ್ಕಿದ್ದರು. ಮತ್ತೆ ಕೆಲವರು ಸ್ವಾರ್ಥದ ದುರಾಶೆಯ ಸಲುವಾಗಿ ಮಾನವ ಜೀವಿಗಳನ್ನೇ

ಮರ್ಧಿಸುವ ಸರ್ವಶಂತ್ರಗಳಿಗೆ ಶ್ರಮಜೀವಿಗಳ ರಕ್ತವನ್ನು ಹೀರಿ. ಅವರ ದುಡಿಮೆಯ ಫಲದಿಂದ ಹೇರಳವಾದ ಲಾಭವನ್ನು ಮಾಡಿ ಕೊಂಡು, ಶ್ರಮಿಕರನ್ನು ಹೀನವಾಗಿ ಕಾಣುವ ಈ ಬಂಡವಾಳಶಾಹಿ ವರ್ಗದ ವಿರುದ್ಧ ಹೋರಾಡಬೇಕಾಗಿದೆ. ಸತ್ಯದ ಹೆಸರಿನಲ್ಲಿ ಒಂದು ಧರ್ಮಯುದ್ಧವನ್ನು ಮಾಡಬೇಕಾಗಿದೆ ಆ ಯುದ್ಧವು ಎಲ್ಲರಿಗೂ ಬೆಳಕನ್ನು ತೋರಿಸಿ ಸನ್ಮಾರ್ಗದಲ್ಲಿ ನಡೆದು ಸತ್ಯದ ಹಾದಿಯಲ್ಲಿ ನಡೆದು ನಮ್ಮ ಬದುಕನ್ನು ಉಜ್ವಲಗೊಳಿಸಿಕೊಳ್ಳೋಣ ಎಂಬ ಹೊಸತರಹದ ವಿಚಾರಧಾರೆಯನ್ನು ಮುದ್ರಣಾಲಯಕ್ಕೆ ಬಂದು, ಕೇಳಿ ಕೊಂಡು ಹೋದರು. ಕೆಲವೊಂದು ಬಂಡವಾಳಶಾಹಿ ಪತ್ರಿಕೆಗಳು ಜನರನ್ನು ಆಕರ್ಷಿಸಲು ಬರೆದ ಬರಹಜಾಲವೆಂದು ಹೀಯಾಳಿಸಿದರು. ಹೀಗೆ ಹೊಂಬೆಳಕಿನ ಬಗ್ಗೆ ನಾನಾ ಪತ್ರಿಕೆಗಳಲ್ಲಿ ನಾನಾತರಹದ ಅಭಿಪ್ರಾಯಗಳು ಬಂದಿದ್ದವು.

೧೩

ಒಂದು ವಿದ್ಯಾಸಂಸ್ಥೆ ಬೆಳೆದು ಜನರ ಪ್ರೀತಿಗೆ ಪಾತ್ರವಾಗ ಬೇಕಾದರೆ ಅಲ್ಲಿ ದುಡಿಯುವ ಉಪನ್ಯಾಸಕರ ಹಾಗೂ ಅಲ್ಲಿಯ ಆಡಳಿತವರ್ಗದ ಉನ್ನತವಾದ ಕೆಲಸಕಾರ್ಯಗಳನ್ನು ಅವಲಂಬಿಸಿದೆ ಅದಲ್ಲದೆ ಅಲ್ಲಿ ದುಡಿಯುವ ಉಪನ್ಯಾಸಕರ ವಿದ್ಯಾಮಟ್ಟ ಹಾಗೂ ವಿದ್ಯಾರ್ಥಿಗಳ ಬುದ್ಧಿಮತ್ತೆ ಎಲ್ಲವೂ ಕಾರಣವಾಗುವುವು. ಈ ಸಂಸ್ಥೆಯಲ್ಲಿ ಮಧುಕರ, ಆನಂದ, ರಾಮುನಂತಹ ಮೇಧಾವಿಗಳನ್ನು ಪಡೆದಿದ್ರೆ, ಅದರ ಜೊತೆಗೆ ದೀಪಕ, ಕಾಮೇಶರಂಥವರು ಸಮಯ ಕಳೆಯಲು ಕಾಲೇಜಿಗೆ ಬರುತ್ತಿದ್ದರು. ಆದರೆ ಮಧುಕರನಿಗೆ ಈ ಸಂಸ್ಥೆಯಲ್ಲಿ ವಿಶೇಶ ಅನುಕೂಲತೆಯಿತ್ತು. ಮಧುಕರ ರಾಜ್ಯದ ಕೆಲವೊಂದು ಬುದ್ಧಿವಂತ ವಿದ್ಯಾರ್ಥಿಗಳಲ್ಲಿ ಒಬ್ಬನಾಗಿದ್ದರಿಂದ ಸಾಕಷ್ಟು ಅನುಕೂಲ ಗಳನ್ನು ಒದಗಿಸಿದ್ದರು. ಮಧುಕರನಿಗೆ ನಾನಾಸಂಘ ಸಂಸ್ಥೆಗಳಿಂದ ಹಣಸಹಾಯ ಒದಗುತ್ತಿತ್ತು. ಈ ಕಾಲೇಜಿನಲ್ಲಿಯೇ ಗೋಪಾಲ ಓದನ್ನು ಮುಗಿಸಿದ್ದನು. ಅದಕ್ಕಾಗಿ ಇಂಥಹ ಒಳ್ಳೆಯ ಬೇರೆಲ್ಲಿಯೂ ಸಿಗುವದಿಲ್ಲ ಎಂದು ತಂದೆಗೆ ಹೇಳಿ ಒಪ್ಪಿಸಿದನು. ಈ ಕಾಲೇಜಿನಲ್ಲಿ

ಯಾವುದೇ ಕಾರ್ಯಕ್ರಮಗಳಾಗಲಿ ಅದನ್ನು ಬಹಳ ಜನರು ಮೆಚ್ಚಿ ಬರುತ್ತಿದ್ದರು.

ಪ್ರತಿವರ್ಷದಂತೆ ಈ ವರ್ಷವೂ ಸಹ ಕಾಲೇಜಿನ ವಾರ್ಷಿಕೋತ್ಸವ ನಡೆದಿದೆ. ಅನೇಕ ಕಾರ್ಯಕ್ರಮಗಳು ಜರುಗಿ ಜನರ ಮನಸ್ಸನ್ನು ರಂಜಿಸಿ ಕೊನೆಯಲ್ಲಿ ಭಾಷಣದ ಕಾರ್ಯಕ್ರಮಗಳು ಉಳಿದಿವೆ. ಅದಕ್ಕಾಗಿ ಶ್ರೇಷ್ಠ ಕವಿಗಳೂ, ಸಮಾಜಸುಧಾರಕರೂ ಆದ ಕುಮಾರರವರು ಬಂದಿದ್ದಾರೆ. "ಭಾರತೀಯನ ಸ್ವಾತಂತ್ರ್ಯ"ದ ಕುರಿತು ಕಾಮೇಶ ಮಾತನಾಡುತ್ತ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ನಲವತ್ತು ವರ್ಷ ಕಳೆದಿವೆ. ಸ್ವಾತಂತ್ರ್ಯದ ನಂತರ ನಾವು ನಮ್ಮದೇ ಆದ ಆಸ್ತಿಪಾಸ್ತಿಗಳನ್ನು ಮಾಡಲು ಸಾಕಷ್ಟು ಅನುಕೂಲವಾಗಿದೆ. ಅನೇಕ ಖಾಸಗೀ ಸಂಸ್ಥೆ-ಗಳು, ಕೈಗಾರಿಕಾ ಸಂಸ್ಥೆಗಳು ಉಗಮಹೊಂದಿ ಜಗತ್ತಿನ ಶ್ರೀಮಂತರಲ್ಲಿ ಬಿರ್ಲಾರಂತಹ ಮಹಾನ್ ಮೇದಾವಿಗಳು ಹೆಸರನ್ನು ಗಳಿಸಿ ಕೊಂಡಿದ್ದಾರೆ. ನಮ್ಮ ಸಂವಿದಾನದಲ್ಲಿ ಸಾಕಷ್ಟು ಕಾನೂನುಗಳು ಶ್ರೀಮಂತರ ಪರವಾಗಿಯೇ ಇವೆ. ನಮ್ಮ ದೇಶದವರೆಲ್ಲ ಶ್ರೀಮಂತರಾಗಬೇಕೆಂಬ ಉದ್ದೇಶದಿಂದಲೇ ಇಂಥಹ ಸಂವಿದಾನಗಳನ್ನು ರಚಿಸಿದ್ದಾರೆ. ಇಂಥಹ ಅನುಕೂಲಗಳನ್ನು ಪಡೆಯುವ ಶಕ್ತಿ ಬುದ್ಧಿಮತ್ತೆ ಕೆಲವೊಂದು ಜನರಿಗೆ ಇಲ್ಲ ಅಂಥಹ ಗುಂಪುಗಳು ಶ್ರೀಮಂತರ ವಿರೋಧ ದಂಗೆಯೆದ್ದು ತಮ್ಮ ಪ್ರತಿಷ್ಠೆಯನ್ನು ಬೆಳಸಿಕೊಳ್ಳಲು ಪ್ರಯತ್ನವನ್ನು ಮಾಡುತ್ತಲಿವೆ. ಅಂಥಹ ಗುಂಪುಗಳನ್ನು ಸದೆಬಡಿದು ನಾವು ಮುಂದೆ ಸಾಗೋಣ ಎಂದು ನುಡಿದನು.

ಮಧುಕರ ಅದೇ ವಿಷಯದ ಮೇಲೆ ಮಾತನಾಡುತ್ತ ಸ್ವತಂತ್ರಿಗಳೇ ಅಥವಾ ನಮ್ಮ ದೇಶಕ್ಕೆ ಸ್ವತಂತ್ರ ಬಂದಿದೆಯೇ ಎಂದು ಸುದೀರ್ಘವಾಗಿ ವಿಮರ್ಶಿಸಿದಾಗ ಸ್ವತಂತ್ರ್ಯದ ಪೂರ್ತಿ ಅರಿವು ನಮಗೆ ಆಗುವುದು. ಉದಾಹರಣೆಗೆ ಜಪಾನ ಕೋರಿಯಾದಂತಹ ಚಿಕ್ಕ ದೇಶಗಳು ಸ್ವತಂತ್ರ ಸಿಕ್ಕ ಕೆಲವೇ ವರ್ಷಗಳಲ್ಲಿ ಅನಾದಿಕಾಲದಿಂದಲೂ ಸ್ವತಂತ್ರ್ಯದಲ್ಲಿದ್ದ ರಾಷ್ಟ್ರಗಳಿಗಿಂತ ಸಾಕಷ್ಟು ಮುಂದಿವೆ. ಅದಕ್ಕೆ ಕಾರಣ, ಅವರಲ್ಲಿಯ ದೇಶಾಭಿಮಾನ, ದೇಶದ ಪ್ರಗತಿಗಾಗಿ ದುಡಿಮೆ,

ದುಡಿಮೆಗೆ ತಕ್ಕ ಪ್ರತಿಫಲ ಸಿಗುವದರಿಂದಲೇ ಸಾಧ್ಯವೆಂದು ಹೇಳ ಬಹುದು. ನಮ್ಮ ದೇಶದ ಜನರಿಗೆ ದೇಶಾಭಿಮಾನವಂತೂ ಯಾರೂ ಹೇಳಿಕೊಡಲಿಲ್ಲ. ದುಡಿಯಲು ಜನರು ಸಿದ್ಧರಿದ್ದಾರೆ ದುಡಿಮೆಯಿಲ್ಲ. ದುಡಿಮೆಯನ್ನು ಕೊಡಲು ಸರಕಾರವೂ ಸಿದ್ಧವಿಲ್ಲ. ಸರಕಾರದ ಹಂಗಿಲ್ಲದೆ ತಾನೇ ಮುಂದುವರೆದು ನ್ಯಾಯಮಾರ್ಗದಲ್ಲಿ ಮುಂದು ವರೆಯುವಂತಹ ಬುದ್ಧಿಜೀವಿಗಳಿಗೆ ಬೆಲೆಯೇಇಲ್ಲ. ಹಣವಂತರಿಗೆ ಬುದ್ಧಿಯ ತೊಂದರೆ, ಬುದ್ಧಿವಂತರಿಗೆ ಹಣದ ತೊಂದರೆ ಹೀಗೆ ತೊಂದರೆಗೆ ಸುಳಿಮಳೆಯಲ್ಲಿಯೇ ಇರುವವರಿಂದ, ನಮ್ಮ ಜನರಿಗೆ ಸ್ವತಂತ್ರ್ಯದ ಅರ್ಥವನ್ನು ತಿಳಿಯಲು ಸಮಯವೇ ಇಲ್ಲದಾಗಿದೆ. ಇದೇ ರೀತಿ ಮುಂದುವರೆದರೆ ಇನ್ನು ಎಂಬತ್ತು ವರ್ಷಗಳು ಕಳೆದರೂ ನಮಗೆ ಸ್ವತಂತ್ರ್ಯದ ಫಲವನ್ನು ಪಡೆಯುವದು ಸಾಧ್ಯವಾಗುವದಿಲ್ಲ. ಜನರಿಂದ ಆರಿಸಿಹೋದ ನಾಯಕರು ಜನರ ದೇಶದ ಪ್ರಗತಿಯ ಬಗ್ಗೆ ವಿಚಾ ರಿಸದೆ ಪ್ರಜೆಗಳನ್ನು ಸರಕಾರವನ್ನು ಸುಲಿದು ತಿಂದು ತಮ್ಮ ರಾಜ ಕೀಯ ಅವಧಿಯಲ್ಲಿ ತಮ್ಮ ಆಯುಷ್ಯ ಪರ್ಯಂತ ಬೇಕಾಗುವಷ್ಟು ಹಣವನ್ನು ಗಳಿಸಿ, ನಾನಾ ಪಂಗಡಗಳ ಮಧ್ಯ ಮತೀಯ ಗಲಭೆ, ಧಾರ್ಮಿಕ ಗಲಭೆಗಳನ್ನು ಹೆಚ್ಚಿಸಿ ಸ್ವಾರ್ಥಸಾಧನೆಗೆ ದುಡಿದು ದೇಶದ ಉನ್ನತಿಗಾಗಿ ಎಳ್ಳಷ್ಟು ದುಡಿಯದೆ, ನೂರೆಂಟು ಯೋಜನೆಗಳನ್ನು ಹಾಕಿಕೊಂಡರು ನಮ್ಮ ದೇಶದ ಬಡತನ, ನಿರುದ್ಯೋಗ ಸಮಸ್ಯೆ ಬಗೆಹರಿಯಲಾರದು. ನಮ್ಮ ದೇಶದಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತಲಿ ರುವ ಅಸ್ಪೃಶ್ಯತಾಸಮಸ್ಯೆ, ಶ್ರಮಜೀವಿಗಳ ಸಮಸ್ಯೆ ಹಾಗೂ ಹಸಿದವ ರಿಗೆ ಅನ್ನ, ನೀರು, ತೊಡಲು ಅರಿವೆಗಳಿಗೂ, ಇರಲು ಮನೆಗಳೂ, ಇಲ್ಲದೆ ತಮ್ಮ ನಿತ್ಯ ಜೀವನವನ್ನು ಗುಡಿಗೋಪುರುಗಳಲ್ಲಿ, ಮರದಡಿ ಯಲ್ಲಿ, ಸರಕಾರಿ ರಸ್ತೆಗಳಲ್ಲಿ ಮಲಗುನಂಥಹ ಭಾರತೀಯನಿಗೆ ಏನು ಮಾಡಿದೆ ನಮ್ಮ ಸ್ವತಂತ್ರದೇಶ. ಇಂಥಹ ಜನರ ಕಲ್ಯಾಣಕ್ಕಾಗಿ ಎಲ್ಲಿವೆ ನಿಮ್ಮ ಹತ್ತಿರ ಕಾರ್ಯಕ್ರಮಗಳು. ದೇಶದ ಬೆನ್ನೆಲುಬು- ಗಳಾದ ರೈತಕಾರ್ಮಿಕರಿಗೂ, ಕೈಗಾರಿಕಾ ಕಾರ್ಮಿಕರಿಗೂ ಏನು ಮಾಡಿದೆ ಈ ಸರಕಾರ. ಈ ಶ್ರಮಜೀವಿಗಳ ಶ್ರಮದಿಂದ ಬಂದ

ಲಾಭದಿಂದ ಅರಮನೆಯನ್ನು ಕಟ್ಟಿಸಿ. ಶ್ರಮಿಕರ ರಕ್ತದ ಕಣಗಳಿಂದ ತಮ್ಮ ಬಾಳನ್ನು ಸಾಗಿಸುತ್ತಿರುವ ಬಂಡವಾಳಶಾಹಿಗಳಿಗೆ ಬಂದಿದೆ ಸ್ವಾತಂತ್ರ್ಯ. ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸಮಾನರು ಎಂದು ಹೇಳುವ ಸಂವಿದಾನ ಏಕೆ ಈ ಎರಡು ವರ್ಗಗಳನ್ನು ಮಾಡಲು ಅನುಮತಿ ನೀಡಿತು. ಈ ವರ್ಗಗಳನ್ನು ಮಾಡಿದವರು ಯಾರು ? ಅವನೊಬ್ಬ ಭಾರತದ ಪ್ರತಿಷ್ಟಿತ ವ್ಯಕ್ತಿಯೆಂದು ಹೇಳಿಕೊಳ್ಳುತ್ತ ನಾಲ್ಕಾರು ಜನರ ಗುಂಪೊಂದನ್ನು ತಯಾರಿಸಿ ಅವರೆಲ್ಲರನ್ನು ಮೇಲಕ್ಕೆತ್ತಿ ಉಳಿದವರನ್ನು ಕೆಳಗೆ ಅದಮುಲು ಪ್ರಯತ್ನಪಡುವ ಹೀನ ಮನಸ್ಸುಳ್ಳ ಸಮಾಜದ ಮುಖಂಡ. ಇಂಥಹ ಹೀನರೇ ನಮ್ಮ ದೇಶವನ್ನು ಆಳಿ ಜನರನ್ನು ಅಧೋಗತಿಗೆ ಒಯ್ಯುತ್ತಿರುವರು. ಅನೇಕ ಸಮಾಜಗಳನ್ನು ಛಿದ್ರಗೊಳಿಸಿದೆ. ಜನರನ್ನು ಒಬ್ಬೊಬ್ಬರನ್ನು ಎತ್ತಿಕಟ್ಟಿ ಆಟವನ್ನು ಆಡಿಸುತ್ತಲಿದೆ. ಎಲ್ಲರೂ ಒಂದಾಗಿ ಬಾಳಲು ಸಾಧ್ಯವಿಲ್ಲದಂತಹ ವಿಭಿನ್ನ ಹಿತಗಳ ವೈರತ್ವವನ್ನು ಉಂಟುಮಾಡಿವೆ. ಈ ತೆರನಾದ ದ್ವಂದ್ವ ಪದ್ಧತಿಯನ್ನು ಹೊಂದಿಕೊಂಡುತಹ ಕೆಲವೊಂದು ನೀಚಶಕ್ತಿಗಳನ್ನು ಅವಲಂಬಿಸಿ ನಮ್ಮ ಸ್ವತಂತ್ರ್ಯ ದೇಶ ಕಾಂತಿ-ಹೀನವಾಗಿದೆ. ಮೋಸದಿಂದ ಜನರನ್ನು ವಂಚಿಸಿ, ಆಳುತ್ತಿರುವ ನೀಚರನ್ನು ಸದೆಬಡಿದು, ಸಮೃದ್ಧಯುತವಾದ ಆಡಳಿತವನ್ನು ಮಾಡಲು, ಅನೇಕ ಬುದ್ಧಿಜೀವಿಗಳು ಕೂಟಿದ್ದಾರೆ. ಅವರನ್ನು ನಾವೂ ಬೆಂಬಲಿಸಿ ನಮಗೆ ಸಿಕ್ಕ ಸ್ವತಂತ್ರ್ಯದ ಲಾಭವನ್ನು ಅನುಭವಿಸಿ, ಮಾನವ ಜನಾಂಗದ ಉನ್ನತಿಗಾಗಿ ದುಡಿದು ನಮ್ಮ ದೇಶವನ್ನು ಉನ್ನತ ಮಟ್ಟದಲ್ಲಿ ಒಯ್ಯಲು ಸ್ವತಂತ್ರ ಭಾರತೀಯ ಪಣವನ್ನು ತೊಟ್ಟು ನಿಲ್ಲಬೇಕು. ನಮ್ಮ ದೇಶವನ್ನು ಸ್ವತಂತ್ರ್ಯಗೊಳಿಸಲು ಎಂಥೆಂಥಹ ತ್ಯಾಗಗಳನ್ನು ಮಾಡಿದ್ದಾರೆ ಎಂಬುವನ್ನು ನೆನೆಸಿಕೊಳ್ಳಬೇಕು, ಎಂದು ನುಡಿದನು. ಜನರೆಲ್ಲರೂ ಚಪ್ಪಾಳೆಯ ಸುರಿಮಳೆಯನ್ನೇ ಮಾಡಿದರು.

ಅದೇ ರೀತಿ "ಭಾರತೀಯ ನಾರಿಯ ಹಕ್ಕುಭಾದ್ಯತೆ" ಕುರಿತು ವನಮಾಲಾ ಭಾರತೀಯ ನಾರಿಗೆ ಪುರುಷನಿಗಿರುವಷ್ಟು ಹಕ್ಕುಗಳಿಲ್ಲ.

ಪುರುಷಪ್ರಧಾನ ಆಗಿರತಕ್ಕ ನಮ್ಮ ಸಮಾಜದಲ್ಲಾಗಲಿ, ದೇಶದಲ್ಲಾಗಲಿ ತನಗೆ ಅನುಕೂಲ ಆಗುವ ಹಾಗೆ ಏಕಪಕ್ಷೀಯವಾಗಿ ಹಕ್ಕುಗಳನ್ನು ಜಾರಿಗೆ ತಂದನು. ಇದನ್ನು ಬಹಳ ದಿನಗಳವರೆಗೆ ತೊಂದರೆಗಳನ್ನು ಅನುಭವಿಸಿ ಪುರುಷನನ್ನು ಬಡಿಗೊತ್ತಿ ಸ್ತ್ರೀಯನ್ನು ಆರಿಸಿತಂದಳು. ನಂತರ ತನ್ನ ಕಾಲಮೇಲೆ ತಾನು ನಿಲ್ಲಬಲ್ಲೆನೆಂಬುದನ್ನು ತೋರಿಸಿ ಕೊಟ್ಟಳು. ಅನೇಕ ಸಂಘ-ಸಂಸ್ಥೆಗಳು ಹುಟ್ಟಿ ಅದರಲ್ಲಿಯೂ ತನ್ನ ಸಮಸ್ಯೆಯನ್ನು ಬಗೆಹರಿಸಿಕೊಂಡಳು. ಎಂದು ಮಾತನಾಡಿದರೆ, ಅದೇ ವಿಷಯವಾಗಿ ಕಮಲ: ಭಾರತೀಯ ನಾರಿಗೆ ಈಡೀ ವಿಶ್ವದಲ್ಲಿಯೇ ಪ್ರಬಲವಾದ ಗೌರವವಿದೆ. ಅದಕ್ಕೆ ಮುಖ್ಯ ವಾದ ಕಾರಣ ಅವಳು ತನ್ನ ಪ್ರಾಣಕ್ಕಿಂತಲೂ ಮಿಗಿಲಾಗಿ ಕಾಣುವ "ಪತಿವ್ರತಾ ಧರ್ಮ" ವೆಂದು ಹೇಳಬಹುದು. ನಮ್ಮ ದೇಶದಲ್ಲಿ ಏಕ ಪತಿ ಅಥವಾ ಏಕಪತ್ನಿತ್ವವು ಜಾರಿಯಲ್ಲಿದೆ. ಪತಿಪತ್ನಿಯರಿರ್ವರೂ ಆಯುಷ್ಯಪರ್ಯಂತ ಕೂಡಿಬಾಳಬೇಕಾಗುವದು. ಬಾಳಲ್ಲಿ ಬರುವ ಸುಖದುಃಖಗಳನ್ನು ಈರ್ವರೂ ಸಮನಾಗಿ ಹಂಚಿಕೊಂಡು ಹೋಗ ಬೇಕು. ಬಾಳುವೆ ಎಂಬುದು ಒಂದು ರಥವಿದ್ದಂತೆ ಅದನ್ನು ಈರ್ವರೂ ಬಹಳ ಜಾಗರೂಕತೆಯಿಂದ ಎಳೆಯಬೇಕು. ಒಬ್ಬರು ಹಿಂದೆ ಸರಿದರೆ ಮತ್ತೊಬ್ಬರಿಗೆ ಬಾರವಾಗುವುದು. ಆಗ ರಥವು ಸಾಗದು, ಈರ್ವರೂ ಸಮನಾಗಿ ಬಂದ ಕಷ್ಟಗಳನ್ನು ಎದುರಿಸಬೇಕು ಈರ್ವರೂ ಅರ್ಥಮಾಡಿಕೊಂಡು ಹೋಗ ಬೇಕು. ಯಾರಾದರೊಬ್ಬರು ಹಕ್ಕಿಗಾಗಿ ಬಾಧ್ಯತೆಗಳನ್ನು ಮರೆತರೆ ಅವರಿಗೆ ಸೋಲು ಕಟ್ಟಿಟ್ಟಬುತ್ತಿ. ಹೆಂಗಸು ಗಂಡಿನ ಸರಿಸಮ ದುಡಿದು ತಿನ್ನಲೂಬಹುದು ಆತನಂತೆ ನಾಲ್ಕಾರು ಜನಕ್ಕೆ ದುಡಿದೂ ಹಾಕಬಹುದು, ಆದರೆ ಆಕೆಯ ಮನೋಭಿಲಾಶೆ ತೀರಿಸಲು ಗಂಡ್ಸ ಬೇಕೆಬೇಕು. ಅದರಂತೆ ಗಂಡಿಗೂ ಸಹ ಅವಶ್ಯವಿದೆ. ಈರ್ವರಿಗೂ ಸಹಕಾರ ಮನೋಭಾವ ಮುಖ್ಯವಾಗಿ ಬೇಕು. ಗಂಡು ದುಡಿದು ಎಲ್ಲರನ್ನು ಸಾಕುವದು ತನ್ನ ಕರ್ತವ್ಯವಾದರೆ, ಹೆಂಗಸು ಗಂಡನ ಹಾಗೂ ಮಕ್ಕಳ ಪಾಲನೆ ಪೋಷಣೆ ಮಾಡುವುದು ತನ್ನ ಆದ್ಯಕರ್ತವ್ಯವೆಂದು ತಿಳಿಯಬೇಕು. ಇವರಲ್ಲಿ ಈರ್ವರೂ ಸರಿಸಮಾನರು. ಭಾರತೀಯನಾರಿ

ತನ್ನದೇ ಆದ ಪ್ರತಿನಿಧಿಯನ್ನು ಆರಿಸಿ ತಂದಾಗ ತನ್ನ ಭಾಧ್ಯತೆಗೆಳನ್ನು ಮರೆತಳು. ಕೇವಲ ಹಕ್ಕಿಗಾಗಿ ಬಡಿದಾಡಿದಳು. ಆಗ ಆಕೆ ಪಾರಾಟದ ನಮೂನೆಯ ವಸ್ತುವಾದಳು. ತನ್ನ ಗೌರವದ ಕಡೆಗೆ ಲಕ್ಷ್ಯವೇ ಸ್ವಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವ ಸಲುವಾಗಿ ತನ್ನತನವನ್ನೇ ಮಾರಿಕೊಂಡಳು ಹಟವನ್ನು ಸಾಧಿಸ ಹೊರಟ ಹೆಂಗಸು ತಾನು ಬಾಳಿನುದ್ದಕ್ಕೂ ಒಂಟಿಯಾಗಿ ಇರಲು ಸಾಧ್ಯವಾಗದಾದಾಗ ಗಂಡಸಿನ ಆಸರೆಯನ್ನು ಬಯಸಿ ಬಂದಳು. ಹೀಗೆ ಹಟವನ್ನು ಸಾಧಿಸಹೊರಟರೆ ಪ್ರಯೋಜನವಿಲ್ಲ. ಈರ್ವರೂ ಬಾಳಿನುದ್ದಕ್ಕೂ ಹೊಂದಿಕೊಂಡು ತಮ್ಮ ತಮ್ಮ ಹಕ್ಕುಗಳನ್ನು ಜೊತೆಗೆ ಕರ್ತವ್ಯಗಳನ್ನು ಮಾಡುತ್ತ ಹೋದಾಗಲೆ ಎಲ್ಲರೂ ಸುಖವಾಗಿರಲು ಸಾಧ್ಯ ಎಂದು ನುಡಿದಳು.

ಅನಂತರ ಬಹುಮಾನಿತರಾದ ಮುಖ್ಯಕರ, ಕವಿಲರಿಗೆ ಬಹು-ಮಾನವನ್ನು ಕೊಟ್ಟು ಈ ದಿವಸ ಅನೇಕರು ತಮ್ಮ ತಮ್ಮ ವಿಚಾರ ಧಾರೆಯನ್ನ ಎಲ್ಲರೆದುರಿಗೆ ಅರುಹಿದ್ದೀರಿ. ತಮ್ಮ ಬುದ್ಧಿಮತ್ತೆಯನ್ನ ತೋರಿಸಿದ್ದೀರಿ. ಬಹುಮಾನವನ್ನು ಪಡೆಯುವದು ಮುಖ್ಯವಲ್ಲ, ಅವರವರ ಮನದ ಅಳಲು ಮುಖ್ಯ. ಇಂದಿನ ನಮ್ಮ ಬಾಲಕರು ನಾಳೆ ನಾಡಿನ ನಾಯಕರಾಗುವವರಿದ್ದೀರಿ. ನಮ್ಮ ದೇಶವನ್ನು ಯಾವಮಟ್ಟದಲ್ಲಿ ಮುಂದೊಯ್ಯಬೇಕು ಎಂಬುದನ್ನು ಬಲು ಜಾಗ್ರತೆಯಿಂದ ವಿಚಾರಿಸಬೇಕು. ಇಲ್ಲಿ ಆಗಮಿಸಿರತಕ್ಕಂಥಹ ಪಾಲಕರು ದೇಶದ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ನಮ್ಮ ದೇಶವನ್ನು ಆಳುವ ಮಕ್ಕಳನ್ನು ಹೇಗೆ ತಯಾರಿಸಬೇಕು ಎಂದು ವಿಚಾರಮಾಡಿ ಅವರಿಗೆ ಈಗಿಂದಲೇ ಕರ್ತವ್ಯಗಳೆಲ್ಲವನ್ನು ಹೇಳಿ. ದೇಶದ ಉನ್ನತಿಗಾಗಿ. ದೇಶದ ಏಳಿಗೆಗಾಗಿ, ಪ್ರಾಮಾಣಿಕವಾಗಿ ದುಡಿದು ಬದುಕಲು ಹೇಳಿ ಕೊಡಬೇಕೆಂದು ನುಡಿದರು.

೧೪

ಹೊಂಬೆಳಕು ಪತ್ರಿಕೆಯು ತನ್ನ ಬೆಳಕನ್ನು ಸುತ್ತಲೂ ಹರಡಿ ಜನರ ನರನಾಡಿಗಳಲ್ಲಿ ಒಲುಮೆಯ ನಂದಾದೀಪವಾಗಿ ತನ್ನ ಪ್ರತಿಷ್ಠೆ

ಯನ್ನು ಪ್ರಜ್ವಲಿಸುತ್ತಲಿದೆ. ಈ ಪತ್ರಿಕೆ ಯಾವುದೇ ರಾಜಕೀಯ ಪಕ್ಷಕ್ಕೆ ಹೊಂದಿಕೊಳ್ಳದೇ, ಯಾವುದೇ ರಾಜಕೀಯ ಬಂಡವುದಾರಿ-ಗಳಿಗೆ ಬಲಿಯಾಗದೆ, ಧೈರ್ಯದಿಂದ ಮುನ್ನುಗ್ಗಿ, ನಗರದ ಸುತ್ತ ಮುತ್ತ ಯಾವುದೇ ರೀತಿಯ ಗಲಭೆಗಳು, ಕಳ್ಳತನಗಳು, ನಡೆಯಲಿ, ಅವುಗಳನ್ನು ಪತ್ತೆಹಚ್ಚಿ ಅದರ ಮೂಲಕಾರಣವನ್ನು ಜನತೆಗೆ ನೀಡುತ್ತಿತ್ತು. ನ್ಯಾಯವನ್ನು ಎತ್ತಿಹಿಡಿದು ದುಷ್ಕರ್ಮಿಗಳನ್ನು ಕ್ರೂರ-ವಾಗಿ ಖಂಡಿಸಿ ತನ್ನ ಹಿರಿತನವನ್ನು ನಿಷ್ಪಕ್ಷಪಾತದಿಂದ ಎತ್ತಿ ತೋರು ತ್ತಿತ್ತು. ನಗರಸಭೆಯ ಅನ್ಯಾಯವರ ಬಗ್ಗೆ ಬಹಳವಾಗಿ ಖಂಡಿಸಿ ಪತ್ರಿಕೆಯಲ್ಲಿ ಪ್ರಕಟಿಸಿದರು.

ನಗರಸಭೆಯ ಪ್ರಮುಖಗುಂಪು ಕೆಲವೊಂದು ರೌಡಿಗಳನ್ನು ಕರೆ ತಂದು ಮುದ್ರಣಾಲಯದ ಮೇಲೆ ಹಲ್ಲೆಯನ್ನು ಮಾಡಿದರು. ಅದಾ-ವದಕ್ಕೂ ಹೆದರದೆ ನ್ಯಾಯ, ನಿಷ್ಠೆಯಿಂದ ಮತ್ತಷ್ಟು ಹರಿತವಾದ ಲೇಖನ ಗಳನ್ನು ಪ್ರಕಟಿಸಿದಾಗ, ರಾಜೀ ಆಗಲು ಸಂಪಾದಕರ ಹತ್ತಿರ ಬಂದು ನಾವೆಲ್ಲರೂ ಒಂದೇ ಊರಲ್ಲಿ ಹುಟ್ಟಿಬೆಳೆದವರು, ಎಲ್ಲರೂ ಸಹಕಾರ ದಿಂದ ಇರೋಣ. ನಮ್ಮ ನಮ್ಮಲ್ಲಿ ವಿರಸಬೇಡ ಎಂದು ರೇವಣ್ಣ ಹೇಳಿದಾಗ, ನಿಮ್ಮ ಮಾತು ಅಕ್ಷರಸಹ ಸತ್ಯ ಈಡೀ ಮಾನವ ಕುಲವೆಲ್ಲಿವೂ ಒಂದೇ ಸಹಕಾರಮನೋಭಾವನೆಯಿಂದ ಬಾಳುವದೇ ಮಾನವಕುಲದ ಮೂಲಧರ್ಮ. ಮಾನವನಿಂದಲೇ ಮಾನವನ ಬಾಳು ಉದ್ಧಾರವಾಗದಿದ್ದರೆ ಬೇರೆಯಾರಿಂದ ಸಾಧ್ಯ. ನಾವೆಲ್ಲ ನ್ಯಾಯವಾದ ಮಾರ್ಗದಲ್ಲಿ ನಡೆದು, ಬಡಜನರ, ಸಾರ್ವಜನಿಕರ ಹಿತಾಶಕ್ತಿಗಾಗಿ ದುಡಿದರೆ, ಅವರು ಕೊಟ್ಟ ಅತ್ಯಮೂಲ್ಯವಾದ ಮತಕ್ಕೆ ಬೆಲೆಯನ್ನು ಕೊಟ್ಟಂತಾಗುವದು. ಆದಕ್ಕೆಲ್ಲ ನಮ್ಮ ಸಂಪೂರ್ಣ ಸಹಕಾರವಿದೆ. ಏನಾದರೂ ಅನ್ಯವಹಾರ ನಡೆದರೆ ನಮ್ಮ ಬೆಂಬಲವಿಲ್ಲ. ಎಂದು ಸಂಪಾದಕರು ಹೇಳಿದಾಗ, ನಿಮ್ಮ ಮಾತು ಬಹಳ ಒಳ್ಳೆಯದು. ನಾವು ಯಾವದೇ ಕಾರ್ಯಕಲಾಪಗಳನ್ನು ಬಹಳ ಮುತವರ್ಜಿವಹಿಸಿ ಮಾಡುತ್ತೇವೆ ನೀರಿನ ಟ್ಯಾಂಕುಗಳು ತಯಾರಾಗಲಿವೆ. ಮೆಡಿಕಲ್ ಕಾಲೇಜನ್ನು ಸ್ಥಾಪಿಸಲು ಸರಕಾರದಿಂದ ಅನುಮತಿಯನ್ನು ಪಡೆದಿದ್ದೇವೆ.

ಎಂದು ಕೇರಿವುಖಾನರು ಹೇಳಿದಾಗ, ನಿಜ ಸಾಹೇಬರೆ ರ್‍ಯಾಂಕುಗಳು ಸೆಂಕ್ಷನ್‌ಆಗಿ ಎಷ್ಟು ವರ್ಷಗಳಾಯ್ತು, ಈಗ ಅವು ಯಾವ ಹಂತದಲ್ಲಿವೆ, ಸರಕಾರವು ಎಲ್ಲ ಹಣವನ್ನು ಪಾವತಿಮಾಡಿದರೂ, ಅರ್ಧಕೆಲಸ ಸಹ ಆಗಿಲ್ಲ ನಗರದ ಅನೇಕ ರಸ್ತೆಗಳನ್ನು ಸುಮಾರು ಮೂರು ವರ್ಷ ದಿಂದ ಸ್ವಲ್ಪವೂ ಒಂದು ಹಿಡಿಮಣ್ಣನ್ನು ಹಾಕಿಲ್ಲ ಆದರೆ ನೀವು ಒಂದು ವರ್ಷದಲ್ಲಿ ಮೂರುಸಲ ರೀಪೇರಿಮಾಡಿದ ದಾಖಲೆಗಳು ನಿಮ್ಮ ಆಫೀಸಿನಲ್ಲಿವೆ. ಇದುನ್ಯಾಯವೇ, ಈ ತರಹ ಮೋಸದ ಕೆಲಸಮಾಡಿದರೆ ಪತ್ರಿಕೆಯವರು ಸುಮ್ಮನೆ ಕೂಡ್ರಲಿಕ್ಕೆ ಆಗುವದಿಲ್ಲ. ಎಂದು ಸಂಪಾದ ಕರು ನುಡಿದಾಗ, ಅದೆಲ್ಲ ನೀವು ಅರ್ಥಮಾಡಿಕೊಳ್ಳಬೇಕ್ರಪಾ ಎಂದು ರೇವಣ್ಣ ನಕ್ಕು ನುಡಿದಾಗ, ಅವನ್ನೆಲ್ಲ ನಾವು ಅಡ್ಜಸ್ಟಮಾಡಿ ಬರೆಯದಿದ್ದರೆ ನಾವು ಚುನಾವಣೆಯಲ್ಲಿ ಮಾಡಿದ ಖರ್ಚಾದರೂ ಗಿಟ್ಟಬೇಕಲ್ಲ. ಬೇರೇಯಾವ ಪತ್ರಿಕೆಗಳು ಈ ವಿಷಯದ ಬಗ್ಗೆ ಒಂದಕ್ಷರ ವನ್ನು ಬರೆಯುವದಿಲ್ಲ. ನೀವು ಅದರಂತೆ ಮಾಮೂಲಿಗೂ ತಯಾರಿಲ್ಲ ಅಂದರೆ ಹೇಗೆ ಎಂದು ನಾಗನಗೌಡರು ನುಡಿದಾಗ, ನೀವು ಹೇಳಿ ದ್ದನ್ನು ಕೇಳಿಕೊಂಡು ಪ್ರಕಟಿಸುವ ಪತ್ರಿಕೆ ಇದಲ್ಲ ಗೌಡರೇ ಬೇರೆ ಪತ್ರಿಕೆಗಳು ತಮ್ಮ ಪವಿತ್ರವಾದ ಧ್ಯೇಯವನ್ನು ಮರೆತು, ತಮ್ಮ ಆಧ್ಯಕರ್ತವ್ಯ ಮರೆತು ತಪ್ಪುದಾರಿಯನ್ನು ಹಿಡಿದು ಹೋದರೆ ಅದು ಅವರ ಮೂರ್ಖತನ. ನಮ್ಮ ಪತ್ರಿಕೆ ಮಾನವತಾವಾದವನ್ನು ಹೇಳಿ ತನ್ನ ಉನ್ನತವಾದ ಧ್ಯೇಯಗಳಿಂದ ಜನರನ್ನು ಸತ್ಯದ ಒಲವಿನ ಹಾದಿಯಲ್ಲಿ ಒಯ್ಯುವಂತಹದು. ಜನರಿಗೆ ಸತ್ಯಾಂಶ ಹೇಳಿ ಕೊಡುವದು ನಮ್ಮ ಧರ್ಮ. ಜನರನ್ನು ಈ ಹಿಂದೆ ಮೋಸಮಾಡಿದಷ್ಟು ಇನ್ನು ಮುಂದೆ ಮಾಡಲಾರಿರಿ. ಜನಹಿತ ಕಲ್ಯಾಣವೇ ನಮ್ಮ ಗುರಿ ಎಂಬುದನ್ನು ಸರಿಯಾಗಿ ಅರ್ಥಮಾಡಿಕೊಳ್ಳಿರಿ. ಎಂದು ಮಧುಕರ ನುಡಿಯಲು, ಮಧುಕರ ರಾಜಕೀಯದಲ್ಲಿ ನೀನಿನ್ನು ಹಸುಳೆ, ಈ ರಂಗದಲ್ಲಿ ನೀನು ಇನ್ನು ಬಹಳಷ್ಟು ಪಳಗಬೇಕು. ನೀನು ಬಿಸಿರಕ್ತದ ಹುಡುಗ ಆವೇಶದಲ್ಲಿ ದುಡಿಕಿದರೆ ಸಾಲದು ನಮ್ಮನ್ನು ಎದುರು ಹಾಕಿಕೊಂಡು ನೀವು ಬದುಕುವದು

ಬಹಳಕಷ್ಟ, ನಿಮ್ಮ ಪತ್ರಿಕೆ ಈಗಿನ್ನು ಅಂಬೆಗಾಲನ್ನು ಇಡುತ್ತಲಿದೆ. ಅದು ಬೆಳೆದು ಮುಂದುವರೆಯಬೇಕಾದರೆ ನಾವು ಹೇಳಿದಂತೆ ಕೇಳಿಕೊಂಡು ಒಂದು ತೀರ್ಮಾನಕ್ಕೆ ಬನ್ನಿರಿ ಎಂದು ಕುಮಾರಗೌಡರು ನುಡಿದಾಗ, ನಿಮ್ಮ ಈ ಅಭಿಲಾಷೆ ಈಡೇರಲಾರದು' ನಿಮ್ಮ ಹೇಯವಾದ ಬಲೆಯಲ್ಲಿ ಅದೆಷ್ಟು ಜನರನ್ನು ತುಂಬಿಕೊಂಡಿದ್ದೀರಿ, ಅದೆಷ್ಟು ನಿಷ್ಕಾಮಂತರನ್ನು ನಿಮ್ಮ ಗುಂಪು ಏನುಮಾಡಿದೆ, ಎಂಥೆಂಥಹ ಮಹತ್ಕಾರ್ಯಗಳನ್ನು ಮಾಡಿದೆ, ಎಂಬುದರ ಬಗ್ಗೆ ನಮ್ಮ ಹತ್ತಿರ ವಿವರವಾದ ಮಾಹಿತಿಗಳಿವೆ. ಅವುಗಳನ್ನು ಸಮಯ ಬಂದಾಗ ಉಪಯೋಗ ಮಾಡ್ತಿವಿ ಎಂದು ಸಂಪಾದಕರು ನುಡಿದಾಗ, ಇಂಥಹ ಗೊಡ್ಡುಬೆದರಿಕೆಗಳಿಗೆ ನಾವು ಹೆದರುವದಿಲ್ಲ ಇದೇರೀತಿ ನೀವು ಮುಂದುವರೆದರೆ ಮುಂದಾಗುವ ಪರಿಣಾಮಗಳಿಗೆ ನೀವೇ ಕಾರಣರಾಗ್ತಿರಿ ಎಂಬುದು ನೆನಪಿರಲಿ, ಯಾವುದಕ್ಕೂ ನಾಳೆ ವಿಚಾರಮಾಡಿ ಹೇಳಿರಿ. ಎಂದು ಕರೀಮುಖಾನರು ಹೇಳಿದಾಗ, ನೀವು ಪುನಃಬರುವ ಅವಶ್ಯಕತೆಯಿಲ್ಲ ಇಂಥಹ ಹೀನವಿಚಾರಗಳನ್ನು ನಮ್ಮಲ್ಲಿ ಚರ್ಚಿಸುವುದು ಇದೇ ಕೊನೆ ಎಂದು ಮಧುಕರ ನುಡಿಯಲು, ಹೌದಾ ಹಾದಗಾರೆ ನಾವಿನ್ನು ಬರತೀವಿ ಎಂದು ನಾಗನಗೌಡರು ರೋಷದಿಂದ ನುಡಿದು ಮೇಲೆದ್ದು ಎಲ್ಲರೂ ಹೋಗುವರು.

೧೫

ಮರುದಿನ ಪತ್ರಿಕೆಯಲ್ಲಿ ನಗರದ ಪ್ರಮುಖರು ಬಂದು ಚರ್ಚಿಸಿದ ವಿಷಯ ಹೊಂಬೆಳಕಿನಲ್ಲಿ ಕಂಡು ನಗರದ ಜನರೆಲ್ಲ ಸಂಪಾದಕರನ್ನು ಕೊಂಡಾಡಿದರು. ಅಲ್ಲದೆ ನಾಗನಗೌಡರ ಮಿಲ್ಲಿನ ಅವ್ಯವಹಾರ ಮತ್ತು ದೀಪಕ, ಕಾಮೇಶರು ನಗರದ ಯುವತಿಯರನ್ನು ಸಿನಿಮಾದಲ್ಲಿ ಪಾತ್ರಕೊಡಿಸುವುದಾಗಿ ಹೇಳಿ ರಾಜಧಾನಿಯ ಪ್ರವಾಸಿ ಮಂದಿರದಲ್ಲಿದ್ದಾಗ ಅವರೆಲ್ಲರನ್ನು ಪೋಲಿಸರು ತಮ್ಮ ವಶಕ್ಕೆ ತೆಗೆದು

ಕೊಂಡಿದ್ದರು. ಇದೆಲ್ಲವನ್ನು ಓದಿದ ನಾಗನಗೌಡರು ತಮ್ಮ ಮರ್ಯಾದೆ ಹಾಳಾಯಿತೆಂದು ಹಾರಾಡಿದರು. ಮಿಲ್ಲಿನಲ್ಲಿ ದುಡಿಯುವ ಕೆಲಸಗಾರರು ಸಂಬಳ ಹೆಚ್ಚಳದ ಬಗ್ಗೆ ನೋಟಿಸನ್ನು ಕೊಟ್ಟಾಗ ಕೆಲಸಗಾರರಿಗೆ ಮನಬಂದಂತೆ ಬಿರುನುಡಿಗಳನ್ನು ಆಡಿಕಳಿಸಿದ ವಿಷಯವೂ ಪ್ರಕಟವಾಗಿತ್ತು. ಈ ವಿಷಯುವನ್ನು ತಿಳಿದ ನಗರದ ಪ್ರಮುಖರಾದ ಕರೀಮುಖಾನ, ರೇವಣ್ಣ, ಕುಮಾರಗೌಡ, ನಾಗನಗೌಡ, ದೇಸಾಯಿ ಎಲ್ಲರೂ ಸೇರಿ ಹೇಗಾದರೂ ಮಾಡಿ ಇವರನ್ನು ಅಂತ್ಯಗೊಳಿಸಬೇಕು. ಇವರನ್ನು ಮುಂದುವರಿಯಲು ಬಿಟ್ಟರೆ ನಾವು ಈ ಊರಲ್ಲಿ ಉಳಿಯದ ಹಾಗೆ ಮಾಡುವರೆಂದು ವಿಚಾರಮಾಡದೇ ಇರಲಿಲ್ಲ.

ಕಾರ್ಮಿಕ ನಾಯಕರಾದ ಕಾಂತಾರಾಜ, ಅಮೀರ, ಬಸವರಾಜ ಹಾಗೂ ಪರಮರಾಜರು ಗೌಡರ ಮಿಲ್ಲಿನ ಮುಂದೆ ಉಪವಾಸ ಕುಳಿತರು. ತಮ್ಮ ಬೇಡಿಕೆಗಳು ಈಡೇರುವವರೆಗೆ ಹೀಗೆಯೇ ಮುಂದುವರೆಯಬೇಕೆಂದು ನಿರ್ಧಾರಮಾಡಿಕೊಂಡಿದ್ದರು. ಅವರ ಬೆಂಬಲಾರ್ಥವಾಗಿ ಮಧುಕರನ ನೇತ್ರತ್ವದಲ್ಲಿ ನಗರದ ಎಲ್ಲೆಡೆ ಸುತ್ತಾಡಿ ಕಾರ್ಮಿಕರ ನ್ಯಾಯವಾದ ಬೇಡಿಕೆಗಳನ್ನು ಈಡೇರಿಸುವ ಸಲುವಾಗಿ ಸುಮಾರು ಮೂರು ತಿಂಗಳಿಂದ ಸತಾಯಿಸುತ್ತಿರುವರೆಂದು ಹೇಳುತ್ತ ಉಪವಾಸ ಕುಳಿತವರ ಹತ್ತಿರ ಬಂದು, ಕಾರ್ಮಿಕರು ದೇಶದ ಹಾಗೂ ಮಿಲ್ಲಿನ ಪ್ರಗತಿಗಾಗಿ ದುಡಿಯುವವರು. ಯಾವುದೇ ಒಂದು ಕೈಗಾರಿಕೋದ್ಯಮಿಯಾಗಲಿ, ಮಿಲ್ಲಾಗಲಿ ಮುಂದುವರೆದು ಜನಪ್ರಿಯವಾಗಬೇಕಾದರೆ ಅಲ್ಲಿ ದುಡಿಯುವ ಕೆಲಸಗಾರರೇ ಕಾರಣವೇ ಹೊರತು ಮಾಲಿಕರಲ್ಲ. ಮಾಲಿಕರು ಬಂಡವಾಳವನ್ನು ಹಾಕಿರಬಹುದು ಎಷ್ಟೋ ಮಾಲಿಕರು ಬಂಡವಾಳವನ್ನು ಹಾಕಿ ಮೂಲೆಗುಂಪೂ ಆಗಿರುವರು. ಆದರೆ ಈ ಮಿಲ್ಲು ಎಲ್ಲ ಮಿಲ್ಲುಗಳಿಗಿಂತ ಅತೀ ಉನ್ನತವಾದ ಮಟ್ಟದಲ್ಲಿ ಇರುವಾಗ, ಈ ಕಾರ್ಮಿಕರ ಅತ್ಯಲ್ಪ ಬೇಡಿಕೆಯನ್ನು ತಿರಸ್ಕರಿಸುವದು ನ್ಯಾಯವಲ್ಲ. ಈ ಮಿಲ್ಲು ಪ್ರಾರಂಭವಾಗುವಾಗ ಕೇವಲ ಹತ್ತುಸಾವಿರದಷ್ಟು ಬಂಡವಾಳ ಹಾಕಿ ಈಗ ಅದು ಹತ್ತುಕೋಟಿ

ಯಷ್ಟು ಆಗಿದೆ. ಇಷ್ಟು ಹೇರಳವಾಗಿ ಬೆಳೆಯಬೇಕಾದರೆ ಅಲ್ಲಿಯ ಕೆಲಸಗಾರರು ಪಟ್ಟಶ್ರಮ ಅಷ್ಟಿಷ್ಟಲ್ಲ. ಆದುದರಿಂದ ನಗರದಲ್ಲಿ ಉಂಟಾಗಿರುವ ಈ ಕೋಲಾಹಲವನ್ನು ಸಾಂತ್ವನಗೊಳಿಸಿ ಕೆಲಸಗಾರರ ಬೇಡಿಕೆಗಳನ್ನು ಈಡೇರಿಸಬೇಕೆಂದು ಮಧುಕರ ಹೇಳಿದರೆ, ಇಂದು ಈ ಯುವಶಕ್ತಿ ದುಡಿಯುವ ವರ್ಗಕ್ಕೆ ದುಡಿತಕ್ಕೆ ತಕ್ಕಫಲವನ್ನು ಕೊಡಿರೆಂದು ಹೇಳಿ ಉಪವಾಸ ನಮ್ಮ ಸಹೋದರರನ್ನು ಬೆಂಬಲಿಸುವ ಸಲುವಾಗಿ ಇಲ್ಲಿಗೆ ಬಂದಿದೆ. ಕುಳಿತ ಮಾಲಿಕವರ್ಗ ಸುಮಾರು ವರ್ಷಗಳಿಂದ ಸಾಕಷ್ಟು ಲಾಭವನ್ನು ತೆಗೆದುಕೊಂಡು ಅಲ್ಲಿ ದುಡಿಯುವ ಕೆಲಸಗಾರರನ್ನು ಬಲುಹೀನವಾಗಿ ಕಾಣುತ್ತಲೇ ಬಂದಿದೆ. ಕೆಲಸಗಾರರ ಬೇಡಿಕೆಗಳನ್ನು ಈಡೇರಿಸುವ ಸಲುವಾಗಿ ಇವರ ಹತ್ತಿರ ಹಣವು ಇರುವುದಿಲ್ಲ. ಆದರೆ ತಾವು ಮನಬಂದಂತೆ ಆಸ್ತಿಗಳನ್ನು ಮಾಡಲು, ಬಂಗಲೆಗಳನ್ನು ಕಟ್ಟಿಸಲು ಹಣವು ಬರುತ್ತದೆ. ಇಂದು ಮಿಲ್ಲಿನಲ್ಲಿಯ ಎಲ್ಲ ಕೆಲಸಗಾರರು ಬಹಳ ತಾಳ್ಮೆಯಿಂದ ಬುದ್ಧಿವಂತಿಕೆಯಿಂದ ಉಪವಾಸವಿದ್ದೂ ಕೆಲಸವನ್ನು ಮಾಡಲು ಹತ್ತಿದೆ. ಆದರೂ ಈ ಮಾಲಿಕನಿಗೆ ಕರುಣೆ-ಯೆಂಬುದೇ ಇಲ್ಲ. ಇಂತಹ ಪಿಶಾಚಿಗಳು ನಮ್ಮ ದೇಶದಲ್ಲಿ ಕಡಿಮೆಯೇನಿಲ್ಲ. ಕಾಲಚಕ್ರ ತಿರುಗುತ್ತದೆ. ಶ್ರಮಜೀವಿಗಳ ತೋಳ್ಬಲಗಳಲ್ಲಿಯ ಶಕ್ತಿ ಬಲಗೊಳ್ಳುತ್ತಲಿದೆ. ಶ್ರಮಿಕರ ರಕ್ತದ ಕಣಗಳಿಂದ ನಿಮ್ಮ ಸಿಂಹಾಸನವನ್ನು ನಿರ್ಮಿಸಿಕೊಂಡು ಮೆರೆದಾಡುತ್ತಿರುವ ನಿಷ್ಠುರಿಯರೇ ಹಣದ ಮದದಿಂದ ಎಲ್ಲವನ್ನು ಸಾಧಿಸಹೊರಟ ಮದಾಂಧರೇ, ಪ್ರತಿಯೊಬ್ಬ ಬಡವನ ದೇಹದ ತುಂಬ ಕ್ರಾಂತಿಯೆಂಬ ರಕ್ತವು ನಿಮ್ಮೆದೆಗೆ ನುಗ್ಗುವ ಮುನ್ನವೇ ಎಚ್ಚರಾಗಿರಿ. ಮುಂದಾಗುವ ಅನಾಹುತಗಳನ್ನು ಎದುರಿಸುವ ಇಚ್ಛೆ ನಿಮ್ಮದಿದ್ದರೆ, ಇದೇ ತರಹ ಮುಂದುವರೆಸಿ, ಇಲ್ಲವೆ ಇನ್ನು ಒಂದುವಾರದಲ್ಲಿ ನೀವು ಯಾವುದೇ ತರಹದ ಮಾತುಗಳನ್ನು ಆಡದಿದ್ದಲ್ಲಿ ನಿಮಗೆ ಆಡಳಿತೆಯನ್ನು ಮಾಡುವದಾ-ಗುವದಿಲ್ಲವೆಂದು ನಮಗೆ ಬಹಳ ಹಾನಿಯಾಗುವದೆಂದು ಸರಕಾರದೆದುರು ಬರೆದು ಕೊಡಿ, ಅದನ್ನು ನಾವು ನಡೆಸುವೆವು ಎಂದು ರಾಮು ನುಡಿದಾಗ, ಎಲ್ಲರೂ ಹೋ ಎಂದು ಚಪ್ಪಾಳೆತಟ್ಟಿದರು. ಮುಂದೆ

ಒಂದು ವಾರದಲ್ಲಿ ಕಾರ್ಮಿಕಅಧಿಕಾರಿ ಮಧ್ಯೆ ಪ್ರವೇಶಮಾಡಿ ಕಾರ್ಮಿಕರ ಬೇಡಿಕೆಗಳನ್ನು ಈಡೇರಿಸಿದ್ದರು. ಇದರಲ್ಲಿ ಕಾರ್ಮಿಕರು ಮೇಲುಗೈ ಪಡೆದಿದ್ದರು.

೧೬

ನಗರದ ಪ್ರಮುಖರಿಗೆ ಅನೇಕತರದಿಂದ ಸೋಲುಗಳು ಪ್ರಾರಂಭ ವಾದವು. ನಾಗನಗೌಡನಿಗಂತೂ ಕೋಪವು ನೆತ್ತಿಗೇರಿತು. ಮಧುಕರ-ನಿಗೂ ತನ್ನ ತಂದೆಗೂ ಇತ್ತಿತ್ತಲಾಗಿ ನಡಿಯುತ್ತಿರುವ ವಾದವಿವಾದ ಗಳು, ದ್ವೇಶಭಾವನೆಗಳನ್ನು ಸೂಕ್ಷ್ಮವಾಗಿ ಗುರುತಿಸಿದ ಕಮಲ ಬಹಳ ಚಿಂತೆಯೊಳಗಾದಳು. ಆದರೂ ಅವರಿರ್ವರು ಬಲು ಸಲುಗೆ ಯಿಂದ ಇರುತ್ತಿದ್ದರು. ಒಂದು ದಿನ ಕಮಲ ಮಧುಕರ ನಮ್ಮ ಮನೆತನದವರಿಂದ ಹಿಂದೆ ನಿಮಗಾದ, ಈಗ ನಿಮಗಾಗುತ್ತಿರುವ ಅನ್ಯಾ-ಯವನ್ನು ನೆನೆಯಿಸಿಕೊಂಡರೆ ನನಗೆ ಬಹಳ ಸಂಕಟವಾಗುವುದು. ನಮ್ಮ ತಾಯಿ ನಿಮ್ಮ ಹಿಂದಿನ ಎಲ್ಲ ಕಥೆ ಹೇಳಿದರು. ಅದನ್ನು ನೆನೆಯಿಸಿಕೊಂಡರೆ ದುಃಖ ಉಕ್ಕಿಬರುತ್ತದೆ ಎಂದು ಅಳಲು ಪ್ರಾರಂಭಿ ಸುವಳು. ನಿಮ್ಮನ್ನು ಒಂದುದಿನ ನಮ್ಮ ಮನೆಗೆ ಕರೆತರಲು ಹೇಳಿ-ದ್ದಾರೆ. ಎಂದು ನುಡಿದಾಗ, ಅದು ಹೇಗೆ ಸಾಧ್ಯ ಕಮಲಾ ನಿನ್ನ ತಂದೆ, ಸಹೋದರ ದೀಪಕ ನನ್ನ ಕಂಡ್ರೆ ಆಗಲ್ಲ, ಅವರು ನನಗೆ ಸಾಕಷ್ಟು ಅನ್ಯಾಯಮಾಡಿದ್ದಾರೆ, ಈಗಲೂ ನನ್ನ ಮೇಲೆ ಆರೋಪ ಗಳನ್ನು ಹೊರಿಸ್ತಾರೆ, ಅವರಿಗೂ ನನಗೂ ವಿರುದ್ದದಾರಿ ಅಂದಮೇಲೆ ಹೇಗೆಸಾಧ್ಯವಾಗ್ತದೆ ಬರಲಿಕ್ಕೆ ಎಂದು ಮಧು ನುಡಿದಾಗ, ಇದೇ ಮಾತನ್ನ ನಮ್ಮ ತಾಯಿಕೂಡಾ ಅಂದರೂ, ನಿಮ್ಮ ಬಗ್ಗೆ ಅವರಿಗೆ ಬಹಳಷ್ಟು ಅಭಿಮಾನ. ಮುಂದೆ ಅವನೊಬ್ಬ ಅಸಾದಾರಣ ವ್ಯಕ್ತಿ-ಯಾಗತಾನೆ ಎಂದು ಆಗಾಗ ಅವಾಗ ಹೇಳುತ್ತಲೇ ಇರತಾರೆ. ಒಂದು ಕೆಲಸಮಾಡಿ ಹೇಗೂ ಗೋಪಣ್ಣ ಈ ತಿಂಗಳಲ್ಲಿ ಇಲ್ಲಿಗೇನೆ ಬರುವ

ನಂತೆ ಆಗ ಬರುವಿರಾ ಎನ್ನಲೂ, ಸಾಧ್ಯವಾದರೆ ಬರತೀನಿ, ಮನೆಗೆ ಬರುವದು ಸಾಧ್ಯವಾಗುತ್ತೋ ಇಲ್ಲವೋ ಆವರು ದೇವಸ್ಥಾನಕ್ಕೆನಾದರೂ ಹೋದಾಗ ನಾನೇ ಬೆಟ್ಟಿಯಾಗತೀನಿ ಎಂದು ಮಧು ನುಡಿದಾಗ, ಕಮಲಾ ಅತ್ಯಾನಂದದಿಂದ ತುಂಬಾ ಸಂತೋಷವೆನ್ನುತ್ತ ಆತನ ಕೈಗಳನ್ನು ಕುಲುಕುವಳು ಒಂದೆರೆಡು ನಿಮಿಷ ಈರ್ವರೂ ಹಾಗೆಯೇ ನಿಂತರು ಕೆಲ ಸಮಯದ ನಂತರ ಕೈಗಳನ್ನು ಕೊಸರಿಕೊಂಡು ಕ್ಷಮಿಸಿ ಕಮಲಾ ಇನ್ನೊಮ್ಮೆ ಹೀಗಾಗದಂತೆ ಎಚ್ಚರದಿಂದ ಇರತೀನಿ ಎನ್ನಲು ಕ್ಷಮೆ ಕೇಳಬೇಕಾದವಳು ನಾನು ನಿಮ್ಮಿಂದ ಬಂದ ಉತ್ತರ ದಿಂದ ಹರ್ಷಗೊಂಡು ದುಡುಕಿದೆ ಕ್ಷಮಿಸಬೇಕಾದವರು ನೀವು ದಯ-ವಿಟ್ಟು ನನ್ನನ್ನು ಕ್ಷಮಿಸು. ಸರಿ ಈರ್ವರೂ ತಪ್ಪಿತಸ್ಥರು ಈ ತೆರನಾದ ಘಟನೆಗಳಿಂದ ನಾವು ಆದಷ್ಟು ದೂರವಿರುವುದೇ ಲೇಸು ಎಂದು ಮಧು ನುಡಿದಿದ್ದಕ್ಕೆ ಕಮಲಾ ಮನಃಪೂರ್ವಕವಾಗಿ ಒಪ್ಪಿದಳು.

ಹೊಂಬೆಳಕು ಪತ್ರಿಕೆಯು ಬಹುಬೇಗ ಜನಪ್ರಿಯವಾದದ್ದು ಕೆಲವು ಶ್ರೀಮಂತರಿಗೆ ನುಂಗಲಾರದ ತುತ್ತಾಯಿತು. ಶ್ರಮಜೀವಿಗಳು ಈ ಪತ್ರಿಕೆ ತಮ್ಮ ಪಾಲಿನ ದಾರಿದೀಪವೆಂದೇ ತಿಳಿದರು. ಅಲ್ಲಲ್ಲಿ ಚಿಕ್ಕಪುಟ್ಟ ಗುಂಪು ತಯಾರಾದವು. ಶ್ರಮಿಕರಿಗೆ ತಮ್ಮದೆ ಆದ ಹಕ್ಕುಗಳನ್ನು ಪಡೆಯಲು ಆಗಾಗ ಮಾಸ್ತರರು, ರಾಮು, ಆನಂದ, ಮೂರ್ತಿ, ಮಧುಕರ, ಬಸವರಾಜ, ಮೊದಲಾದವರು ಸುತ್ತ ಮುತ್ತಲೂ ತಿರುಗಿ ವಿವರಗಳನ್ನು ಕೊಟ್ಟುಬರುತ್ತಿದ್ದರು. ನಗರದಲ್ಲಿಯಂತೂ ಗೌಡರ ಮಿಲ್ಲಿನ ಎಲ್ಲ ಕಾರ್ಮಿಕರು ಈ ಪತ್ರಿಕೆಯ ಸಕ್ರೀಯ ಕಾರ್ಯ ಕರ್ತರಾದರು. ಕೇವಲ ಹತ್ತಾರು ಜನರಿಂದ ಪ್ರಾರಂಭವಾದ ಈ ಗುಂಪಿನಲ್ಲಿ ಈಗ ನಗರದಲ್ಲಿಯೇ ಸಾವಿರಾರು ಯುವಕರು ಕಾರ್ಯ ಕರ್ತರಾಗಿ ಕೆಲಸವನ್ನು ಮಾಡುತ್ತಿದ್ದಾರೆ. ಐಕ್ಯತೆ ಹಾಗೂ ಹೋರಾಟ ಗಳು ನಮ್ಮ ಮುಖ್ಯ ಧ್ಯೇಯಗಳು. ಜನರಲ್ಲಿ ಐಕ್ಯತೆಯು ಇದ್ದರೆ ನಾವು ಎಂಥೆಂಥಹ ಸಮಸ್ಯೆಗಳು ಬಂದರೂ ಬಗೆಹರಿಸಿಕೊಳ್ಳಬಹುದು. ಬಲವಾದ ಐಕ್ಯತೆಯಿಂದ ಹೋರಾಟಮಾಡಿ ಏನನ್ನಾದರೂ ಗಳಿಸ ಬಲ್ಲೆವು ಎಂಬುದನ್ನು ಈಗಾಗಲೆ ನಾವು ಸಾಕಷ್ಟು ಉದಾಹರಣೆಗ-

ಳಿಂದ ಮನವರಿಕೆಯಾಗಿವೆ. ನಾವು ದುಡಿಯುವವರು ದುಡಿಯಲು ಹೊಟ್ಟೆಗೆ ಆಹಾರ ಉಡಲು ಅರಿವೆ, ಇರಲು ಮನೆಗಳು ಮುಖ್ಯ ಇವೆಲ್ಲವನ್ನು ಮಾಲಿಕವರ್ಗ ಒದಗಿಸಿದರೆ ನಾವು ನಿಮ್ಮಲ್ಲಿ ದುಡಿದು ನಿಮ್ಮ ಉದ್ಯಮವನ್ನು ಸಾಕಷ್ಟು ಉನ್ನತಮಟ್ಟಕ್ಕೆ ಒಯ್ಯುವೆವು. ಹೀಗೆಯೇ ಅನೇಕ ಶ್ರಮಜೀವಿಗಳು ಶ್ರೀಮಂತರ ವಿರುದ್ಧ ದಂಗೆ ಯೆದ್ದರು. ಅಲ್ಲದೆ ಅವರನ್ನು ಸೋಲಿಸಿ ತಮ್ಮ ನ್ಯಾಯವಾದ ಫಲವನ್ನು ಸಾಧಿಸಿದರು. ಅನಂತರ ಎಲ್ಲ ಶ್ರಮಿಕರನ್ನು ಒಂದು ಗೂಡಿಸಿ ಐಕ್ಯತೆಯನ್ನು ಕಾಪಾಡಿಕೊಳ್ಳುವದನ್ನು ಎಲ್ಲರಿಗೂ ತಿಳಿಯ ಪಡಿಸಿದರು. ನಗರದ ಸುತ್ತಮುತ್ತಲಿನ ಒಂದೆರಡು ಕಾಫಿ ಎಸ್ಟೇಟಿನ ಮಾಲಿಕರು ಕೂಲಿಕಾರರಿಗೆ ಸರಿಯಾದ ಕೂಲಿಕೊಡುವ ಸಲುವಾಗಿ ಕೇಳಿಕೊಂಡಾಗ ಅವನು ಕೊಡದಾದಾಗ, ಕೆಲಸಗಾರರು ಹೋರಾಟಕ್ಕೆ ಇಳಿದರು. ಮಾಲಿಕನು ನಾಲ್ಕಾರು ಜನರನ್ನು ಕೆಲಸದಿಂದ ವಜಾ ಮಾಡಿದನು. ಅಲ್ಲದೆ ಬೇರೆ ಕೆಲಸಗಾರರನ್ನು ನಿಯಮಿಸುವ ಸಲುವಾಗಿ ಸಾಕಷ್ಟು ಪ್ರಯತ್ನ ಪಟ್ಟನು. ಆದರೆ ಯಾವ ಕೂಲಿಕಾರನೂ ಕೆಲಸಕ್ಕೆ ಹೋಗಲಿಲ್ಲ. ಅಲ್ಲದೆ ಈ ಹೀನಪ್ರವೃತ್ತಿಯನ್ನು ಮಾಲಿಕರು ಬಿಟ್ಟು ಮೊದಲಿನ ಕೆಲಸಗಾರರನ್ನು ನಿಯಮಿಸಿಕೊಂಡು ಅವರಿಗೆ ಸರಿಯಾದ ಕೂಲಿಯನ್ನು ಕೊಡಬೇಕೆಂದು ಅನೇಕ ಗುಂಪುಗಳಿಂದ ಒತ್ತಾಯ ಬಂದಿತು. ಅಲ್ಲದೆ ಅವರಿಂದ ಧನಸಹಾಯವು ಕೆಲಸ ಗಾರರಿಗೆ ದೊರೆತಾಗ, ಮಾಲಿಕನು ತನ್ನ ನಿಲುವನ್ನು ಬದಲಿಸಿ ಕೆಲಸಗಾರರು ಹೇಳಿದಂತೆ ಒಪ್ಪಿಕೊಂಡನು. ಹೀಗೆ ಯುವಶಕ್ತಿ ಈ ಸಂಘಟನೆಯಲ್ಲಿ ದುಡಿಯಲು ಬಲುಬೇಗ ಮುಂದೆಬಂದರು.

ಈ ಸಂಘಟನೆಯನ್ನು ಮುರಿಯಲು ಸಾಕಷ್ಟು ಪ್ರಯತ್ನಗಳು ನಡೆದರೂ ಸಹ ಲಕ್ಷಿಸದೆ ಸಾವಿರಾರು ಸ್ವಯಂಸೇವಕರು ಹೊಸ ಸಮಾಜ ನಿರ್ಮಾಣದ ಗುರಿಯನ್ನು ಹೊಂದಿ ಹಗಲಿರುಳು ದುಡಿಯುತ್ತಿದ್ದರು. ಈ ಗುಂಪಿನಲ್ಲಿ ಒಬ್ಬ ಮುಖ್ಯಸ್ಥನನ್ನಾಗಿ ಆನಂದನನ್ನು ಮಾಡಿ ಆತನನ್ನು ಈ ಸಂಘದ ಸಂಚಾಲಕನೆಂದು ಕರೆದರು. ಅನಂತರ ನಾಲ್ಕಾರು ಹಳ್ಳಿಗಳಿಗೆ ಒಬ್ಬರಂತೆ ಉಪಸಂಚಾಲಕರನ್ನು ನೇಮಿಸಿ

ಕೊಂಡು, ಶ್ರಮಿಕರು ಹಾಗೂ ಬಡಜನಾಂಗದ ಉನ್ನತಿಗಾಗಿ, ಪ್ರತಿ ತಿಂಗಳೂ ಚರ್ಚಾಕೂಟವನ್ನು ಮಾಡಿ ನಮ್ಮ ಈ ಕ್ರಾಂತಿಮಾನವ ತಾವಾದವನ್ನು ಮೀರಿ ಹೋಗಬಾರದು. ಮಾನವನು ಶುದ್ಧವಾದ ಮನಸ್ಸನ್ನು ಕ್ರೂರಯಾತನೆಯ ವಿಭಜನೆಗೆ ಗುರಿಮಾಡಿದ, ಈ ಜಗತ್ತನ್ನು ನಾವು ಎದುರಿಸುತ್ತ ಮುಂದುವರೆಯಬೇಕು. ನಾವು ತುಳಿಯುತ್ತಿರುವ ದಾರಿಯತುಂಬೆಲ್ಲ ಬರೀ ಮುಳ್ಳುಗಳೇ ತುಂಬಿ ಕೊಂಡಿವೆ. ಅವುಗಳನ್ನು ಮೆಟ್ಟಿ ನಾವು ಮುನ್ನಡೆಯಬೇಕಾಗಿದೆ. ಅಂದಾಗ ನಮ್ಮಿಂದ ನಮ್ಮ ಗುರಿಯನ್ನು ತಲುಪಲು ಸಾಧ್ಯವಾಗ್ತದೆ ಎಂದು ಎಲ್ಲರಿಗೂ ತಿಳಿಯುವಂತೆ ಹೇಳುತ್ತಿದ್ದರು. ಈ ಎಲ್ಲ ವಿಚಾರ ವನ್ನು ಹೊಂಬೆಳಕು ಪ್ರಕಟಿಸುತ್ತಿತ್ತು.

ಆದರೆ ಬಂಡವಾಳಶಾಹಿಗಳಿಗೆ ಈ ಧೋರಣೆಗಳು ಸಹಿಸಲಿಲ್ಲ. ಅಲ್ಲದೆ ಅಲ್ಲಲ್ಲಿ ಶ್ರೀಮಂತರ ವಿರುದ್ಧ ಹೋರಾಡಿ ಈ ಗುಂಪು ನಗರದ ಸುತ್ತಲಷ್ಟೇ ಅಲ್ಲದೆ ನಾಡಿನಾದ್ಯಂತ ಹೊಮ್ಮಿಕೊಂಡು, ತನ್ನ ಬೆಳಕನ್ನು ಹೊಂಬೆಳಕು ಪತ್ರಿಕೆಯ ಮುಖಾಂತರ ಬಿಡುತ್ತ, ಜನರ ಪ್ರೀತಿಯನ್ನು ಈ ಯುವಶಕ್ತಿ ಗಳಿಸಿಕೊಂಡಿತು. ಇದನ್ನು ಹೇಗಾದರೂ ಮಾಡಿ ಮುಂದುವರೆಯದಂತೆ ಮಾಡಬೇಕೆಂದು ಸಾಕಷ್ಟು ಶ್ರೀಮಂತರು ಹೊಂಚುಹಾಕಿದ್ದರು. ಒಮ್ಮೆ ನಾಲ್ಕಾರುಜನ ಕಾರ್ಯ ಕರ್ತರನ್ನು ಹೊಡೆದರು ಅಲ್ಲದೆ ಅವರು ಒಯ್ಯುತ್ತಿದ್ದ ಪತ್ರಿಕೆಗಳನ್ನು ಸುಟ್ಟುಬೂದಿಮಾಡಿದರು. ಈ ಹೀನ ಕೃತಿಯನ್ನು ಬಹಳಜನ ಖಂಡಿ ಸಿದರು. ಕಾರ್ಯಕರ್ತರಂತೂ ಈ ಕೆಲಸಕ್ಕೆ ಕಾರಣರಾದವನ್ನು ಜೀವಂತ ಸುಡಲು ಪಣತೊಡಲು, ಮಧುಕರ ಹಾಗೂ ಆನಂದರ ಒತ್ತಾಯದಿಂದ ಮೇರೆಗೆ ತಮ್ಮ ಮಾತನ್ನು ಒಂದು ಶರತ್ತಿನ ಮೇಲೆ ಮರಳಿ ತೆಗೆದುಕೊಂಡು, ಇನೇ ತರಹದ ಘಟನೆ ಮತ್ತೊಮ್ಮೆ ನಮ್ಮ ಮೇಲೆ ಜರುಗಿದ್ದೇ ಆದರೆ ಅವರನ್ನು ಜೀವಸಹಿತ ಬಿಡುವದಿಲ್ಲ ಎಂದು ಹೇಳಿದಾಗ, ಎಲ್ಲರೂ ಒಪ್ಪಿಕೊಂಡು ಸುಮ್ಮನಾದರು. ಮುಂದೆ ಮತ್ತೆ ಯಾವುದೇ ತೆರನಾದ ಅಹಿತಕರಘಟನೆಗಳು ನಡೆಯಲಿಲ್ಲ. ಈ ಗುಂಪು ಕೆಲವೇ ದಿನಗಳಲ್ಲಿ ತನ್ನ ವಿಶಾಲವಾದ ಮನೋಭಾವನೆಯಿಂದ ಯಾರೂ

ಸಾಧಿಸಲಾಗದ ಪ್ರಗತಿಯನ್ನು ಜನಪರ ಕಾರ್ಯಗಳನ್ನು ಮಾಡಿತೋರಿಸಿತು.

ಈ ಗುಂಪಿನ ಸಾಧನೆಯನ್ನು ಸಹಿಸಲಾರದೆ ಅನೇಕ ಶ್ರೀಮಂತರು ಒಂದಾಗುತ್ತ ಬಂದರು. ದೀಪಕ, ಕಾಮೇಶರೂ ಸಹ ಶ್ರೀಮಂತರನ್ನು ಕಂಡು ತಮ್ಮ ಸಂಘಟನೆಯನ್ನು ಬೆಳೆಯಿಸಿಕೊಂಡರು ಆದರೆ ಅವರವರ ವಯಕ್ತಿಕ ಹಿತಾದೃಷ್ಟಿ, ತಮ್ಮ ತಮ್ಮಲ್ಲಿಯ ಮತೀಯ ಭಾವನೆ ಅಲ್ಲದೆ ರಾಜಕೀಯ ಭಿನ್ನಾಭಿಪ್ರಾಯ, ಅವರೆಲ್ಲರೂ ಒಂದಾಗಲೂ ಬಿಡಲಿಲ್ಲ. ಒಬ್ಬರಿಗೊಬ್ಬರು ಎತ್ತಿಕಟ್ಟಿ, ತಮ್ಮ ಪ್ರತಿಷ್ಟೆಯನ್ನು ಬೆಳಸಿಕೊಳ್ಳಲು ಪ್ರಾರಂಭಿಸಿದರು. ಹೀಗಾಗಿ ಶ್ರೀಮಂತ ಸಂಘಟನೆ ಬೆಳೆದು ಬರಲಿಲ್ಲ. ಆದರೆ ದುಡಿಯುವ ಜನಾಂಗ ತಾವೆಲ್ಲರೂ ಒಂದೇ ಎಂಬ ಹಿರಿದಾದ ಮನಸ್ಸುಉಳ್ಳವರು. ಇವರ ಪ್ರಗತಿಗಾಗಿ ಹೊಂಬೆಳಕಿನ ಹರಿತವಾದ ಸಂಪಾದಕೀಯ ನಗರದ ಪ್ರಮುಖರಿಂದ ಬಡಜನತೆಗೆ ಒದಗುವ ಕಿರುಕುಳದ ಸರಪಣಿಯನ್ನು ಯಾರ ಮುಲಾಜಿಲ್ಲದೆ ಬಯಬೀತಿಯಿಲ್ಲದೆ ಈ ಪತ್ರಿಕೆಯಲ್ಲಿ ಸಂಪಾದಕರು ಪ್ರಕಟಿಸುತ್ತಿದ್ದರು. ದೀಢೀರನೆ ಸಾಹುಕಾರರಾಗಲು ಹೊರಟ ನಾಲ್ಕಾರು ನಗರದ ಪ್ರಮುಖರು ದಸ್ತಗಿರಿಯಾಗಿದ್ದು, ನಂತರ ಅವರನ್ನು ಜಾಮೀನ ಮೇಲೆ ಮಂತ್ರಿಗಳು ಬಿಡಿಸಿಕೊಂಡು ಬಂದ ಸಮಾಚಾರವು ಸಂಪಾ- ದಕರಿಗೆ ಗೊತ್ತಾಯಿತು. ಆಕಸ್ಮಾತ ರಾಜದಾನಿಗೆ ಹೋದಾಗ ಈ ವಿಷಯವು ಸಂಪಾದಕರಿಗೆ ತಿಳಿಯಿತು. ಇನ್ನೆರಡು ದಿನದಲ್ಲಿ ಇವರ ಪತ್ರಿಕೆಯಲ್ಲಿ ಈ ಸಮಾಚಾರವನ್ನು ಬರುವದೆಂದು ತಿಳಿದು ಅವರನ್ನು ಹೇಗಾದರೂ ಮಾಡಿ ಮುಗಿಸಿಬಿಡಲು ನಾಗನಗೌಡರಿಗೆ ಮಂತ್ರಿಗಳಿಂದ ತಂತಿಬಂದಾಗ ಗೌಡರು ಎಲ್ಲ ತಯಾರಿಯಲ್ಲಿ ಕುಳಿತರು.

ಸಂಪಾದಕರಾದ ಸಂಗಪ್ಪಮಾಸ್ತರರು ರಾಜದಾನಿಯಿಂದ ನೇರ- ವಾಗಿ ಬಂದು, ನೇರವಾಗಿ ಆನಂದನ ತಂದೆಯ ಊರಿಗೆ ಹೋದರು. ನಗರದಿಂದ ಕೇವಲ ಹದಿಮೂರು ಕಿಲೋಮೀಟರದಲ್ಲಿದ್ದ ಊರಿಗೆ ಹೋದರು. ಅವರ ಸಂಗಡ ಕರೀಮು ಸಹ ಹೋಗಿದ್ದನು. ಮರಳಿ ಬರಲು ಸರಕಾರಿ ಬಸ್ಸುಗಳು ಇಲ್ಲದ್ದರಿಂದ, ಆನಂದರ ಕಾರಿನಲ್ಲಿ ಬಂದರು. ಆ ಕಾರಿನಲ್ಲಿ ಸಂಗಪ್ಪಮಾಸ್ತರ, ಕರೀಮು ಹಾಗೂ ಕಾರ

ಚಾಲಕರಷ್ಟೇ ಇದ್ದರು. ಅರ್ಧಹಾದಿ ಬಂದನಂತರ ಮಧ್ಯದಲ್ಲಿ ಬಹಳಷ್ಟು ತಗ್ಗಿನಲ್ಲಿ ರೋಡಿದೆ. ಅಲ್ಲಿ ಕಾರು ಹೋಗಬಾರದೆಂದು ರಸ್ತೆಯ ತುಂಬೆಲ್ಲಾ ಕಲ್ಲುಗಳನ್ನು ಹಾಕಿದ್ದರು. ಮೂವರು ಬಂದು ಕಲ್ಲುಗಳನ್ನು ತೆಗೆಯುತ್ತಿರುವಾಗ ಎಂಬತ್ತು ಜನರು ದಾವಿಸಿಬಂದು ಎಲ್ಲರನ್ನೂ ತಮ್ಮ ಕೋಲುಗಳಿಂದ ಸರಿಯಾಗಿ ಹೊಡೆದರು. ಅನಂತರ ಅವರನ್ನು ಕಾರಿಗೆ ಕಟ್ಟಿದರು. ಮೂವರಿಗೂ ಹಾಗೂ ಕಾರಿಗೂ ಸರಿಯಾಗಿ ಪೆಟ್ರೋಲನ್ನು ಸುರಿದು ಬೆಂಕಿಯನ್ನು ಹಚ್ಚಿದರು. ಈ ಮೂವರ ದುರಾದೃಷ್ಟವೋ ಅಥವಾ ರೌಡಿಗಳ ಪುಣ್ಯವೋ ಒಂದೆರೆಡು ತಾಸುಗಳವರೆಗೆ ಅಲ್ಲಿ ಯಾರು ಬರಲಿಲ್ಲ. ಆನಂತರ ನಗರಕ್ಕೆ ಸಿನೆಮಾ ನೋಡಲು ಬಂದವರು ಮರಳಿ ತಮ್ಮ ಊರಿಗೆ ಹೋಗುವಾಗ ಈ ಅಹಿತಕರ ಘಟನೆಯನ್ನು, ಉರಿಯನ್ನು ನೋಡಿ ನಗರದಲ್ಲೆಲ್ಲ ಹೇಳಿದರು. ನಗರದಿಂದ ಜನರು ಬಂದರು. ಪೋಲಿಸರು ಅಗ್ನಿಶಾಮಕ ವನ್ನು ತಂದು ಉರಿಯನ್ನು ಆರಿಸಿದರು. ಶವಗಳು ಮಾತ್ರ ಪತ್ತೆ ಯಾಗಲಿಲ್ಲ. ಆದರೆ ಕಾರು ಮಾತ್ರ ಆನಂದರದೆಂದು ತಿಳಿಯಿತು. ನಂತರ ಆನಂದನ ಊರಲ್ಲಿ ವಿಚಾರಿಸಿದಾಗ ಈ ಮೂವರನ್ನು ಕೊತ್ತು ಕೊಂಡು ಕಾರು ನಗರಕ್ಕೆ ಬಂದಿತ್ತೆಂದು ತಿಳಿದಾಗ, ಕಾರ್ಯಕರ್ತ- ರೆಲ್ಲ ದುಃಖಾಗ್ನಿಯಲ್ಲಿ ಬಂದು ಹೋದರು. ಸಂಗಪ್ಪಮಾಸ್ತರ ಹೆಸರನ್ನು ಕೇಳದ ವ್ಯಕ್ತಿಯೇ ನಗರದಲ್ಲಿ ಇರಲಿಲ್ಲ. ಚಿಕ್ಕ ಮಕ್ಕಳಿಗೂ ಸಹ ಚಿರಪರಿಚಿತ ವ್ಯಕ್ತಿ. ಶ್ರಮಿಕರಂತು ತಮ್ಮ ಪಾಲಿನ ದೇವರೆಂದು ನಂಬಿದ್ದರು. ನಂತರ ಪೋಲಿಸರು ಅವರ ಅಧಿಕಾರಿಗಳನ್ನು ಕರೆತಂದು ಕಾನುನು ಪ್ರಕಾರ ಪಂಚನಾಮೆ ಮಾಡಿಸಿದರು. ಕಾರಿನ ಸುತ್ತಲೂ ಪಾವಡರನ್ನು ಎಸದು ಫೋಟಗಳನ್ನು ತೆಗೆದರು. ಅನಂತರ ನಾಯಿ- ಗಳನ್ನು ತಂದು ಹೆಜ್ಜೆಗಳ ಗುರುತನ್ನು ಕಂಡು ಹಿಡಿದು ಅವು ನಗರಕ್ಕೆ ಹೋಗಿರುವದಾಗಿ ಹೇಳಿದರು. ಈ ಸುದ್ದಿಯನ್ನು ತಿಳಿದು ನಾಗನಗೌಡರು, ದೀಪಕ, ಕುಮಾರಗೌಡರು ಅಲ್ಲಿಗೆ ದಾವಿಸಿಬಂದು ಜನರೆದುರು ಮಾಸ್ತರರನ್ನು ಹೊಗಳಲು ಪ್ರಾರಂಭಿಸಿದರು. ಆದರೆ ಈ ಹೀನಕೃತ್ಯ ಯಾರಿಂದ ಆಗಿದೆ ಎಂಬುದು ಯಾರಿಗೂ ತಿಳಿಯು

ದಾಯಿತು. ಮಾಸ್ತರಿಗಾದ ಈ ದುರ್ಘಟನೆಯನ್ನು ಕಂಡು ಮಧು, ರಾಮು, ಬಸವರಾಜ, ಮೂರ್ತಿ, ರಾಜೇಶ, ಆನಂದರಿಗೆ ಮುಂದಿನ ದಾರಿಯೇ ತಿಳಿಯಲಿಲ್ಲ. ಇವರೆಲ್ಲರ ರೋದನವನ್ನು ಕಂಡ ಜನರು ಮರಮರ ಮರುಗಿದರು. ಕಮಲ, ಭಾಗ್ಯರು, ವಿಮಲಳನ್ನು ಹಿಡಿದು ಹಿಡಿದು ಸಾಕಾಗಿ ಹೋಯಿತು.



ವಿಮಲಳ ಅನಾಥ ಸಂಸಾರವನ್ನು ಮುಂದೆ ಸಾಗಿಸಲು ಹೆಗಲು ಕೊಟ್ಟು ಅವರನ್ನು ಅವಳು ಹೇಗೆ ತಾನೆ ಮರೆತಾಳು. ತಂದೆ-ತಾಯಿ ಬಂಧು-ಬಳಗವೆಲ್ಲವೂ ಮಾಸ್ತರರೇ ಆಗಿದ್ದರು ವಿಮಲಳಿಗೆ ಸಂಗಪ್ಪ ಮಾಸ್ತರರ ದೇಹವನ್ನು ಆನಂದನ ತಂದೆಯು ತಮ್ಮ ವಶಕ್ಕೆ ತೆಗೆದುಕೊಂಡರು. ನಗರದ ತುಂಬೆಲ್ಲ ಮಾಸ್ತರರ ದೇಹವು ಎಲ್ಲರನ್ನು ಬೆಟ್ಟಿಯಾಗಿ ಅಂತಿಮ ನಮನಗಳನ್ನು ಹೇಳುತ್ತಿರುವಾಗ ಗೋಪಾಲನೂ ಸಹ ಬಂದು ಮಾಸ್ತರರಿಗೆ ಹೂಗುಚ್ಛವನ್ನು ಹಾಕಿ ಅಂತಿಮ ಪ್ರಣಾಮಗಳನ್ನು ಹೇಳಿದನು. ಮಾಸ್ತರರ ಈ ಅಂತಿಮ ದರ್ಶನಕ್ಕೆ ನಗರದ ಸುತ್ತಮುತ್ತಲಿನ ಸಾವಿರಾರು ಕಾರ್ಯಕರ್ತರು ಅಭಿಮಾನಿಗಳು ಬಂದಿದ್ದರು. ಈ ಹಿಂದೆ ಯಾವ ಕೆಲಸಕ್ಕೂ ಸೇರದ ಈ ಹಿಂದೆ ಯಾವ ಕೆಲಸಕ್ಕೂ ಸೇರದ ಈ ಜನಸಮೂಹವನ್ನು ಇಂದು ಕಂಡ ನಗರದ ಜನರು ಬೆರಗಾಗಿ ಹೋದರು. ನಾಗನಗೌಡರ ಗುಂಪು ಈ ಜನರನ್ನು ಕಂಡು ಭಯಗೊಂಡರು, ಮಾಸ್ತರರಿಗೆ ಇಷ್ಟೊಂದು ಜನರ ಬೆಂಬಲವಿದೆಯೇ ? ಆಕಸ್ಮಾತ್ "ಸತ್ಯಂಶ" ಹೊರಬಿದ್ದರೆ ಎಂದು ಮೈಯಲ್ಲಿ ನಡುಕ ಬಂದಿತು.

ಬಾಲಮಿತ್ರನನ್ನು ಕಳೆದುಕೊಂಡ ಆನಂದನ ತಂದೆ ಅತೀವ ದುಃಖದಲ್ಲಿದ್ದರು. ಮಾಸ್ತರರ ದೃಢವಾದ ಸಿಲುವು, ಮಹತ್ತರವಾದ ವ್ಯಕ್ತಿತ್ವ, ನ್ಯಾಯ, ನಿಷ್ಠುರವಾದಿತನವನ್ನು ನೆನೆಯಿಸಿಕೊಂಡು ಮರುಗಿದರು. ಹೀಗೆಯೇ ನಗರವೆಲ್ಲ ಜನರು ಈ ಅನಾಹುತವನ್ನು ನೆನೆಯಿಸಿಕೊಂಡು ದುಃಖದಲ್ಲಿ ಮುಳುಗಿಹೋದರು. ಕೆಲವರಂತೂ ಕೋಪದಿಂದ

ಮನಬಂದಂತೆ ಕೂಗಾಡಿದರು. ಕೆಲವರಂತೂ ಈ ಅನಾಹುತವನ್ನು ಮಾಡಿದವರನ್ನು ಪತ್ತೆಹಚ್ಚಿ ನಾವು ಅವರನ್ನು ಬಸ್ಮಮಾಡೋಣ ಎಂದು ಹೇಳುತ್ತ, ಅದಕ್ಕಾಗಿ ನಮ್ಮ ಪ್ರಾಣವೂ ಹೋಗಲಿ ಎಂದು ಕೋಪದಿಂದ ತಿರುಗಾಡಹತ್ತಿದರು. ಅವರೆಲ್ಲರನ್ನು ಸಮಾದಾನ ಪಡಿಸುವದು ಆನಂದನ ತಂದೆಯ ಕೆಲಸವಯ್ತು. ಎಲ್ಲರೂ ಒಂದು ಕಡೆ ಸೇರಲು ಹೇಳಿದರು.

ಅದರಂತೆ ಪತ್ರಿಕೆಯ ಕಾರ್ಯಾಲಯದಲ್ಲಿ ಸೇರಿದರು. ಮಾಸ್ತರರು ನಮ್ಮನ್ನು ಆಗಲಿ ಎಲ್ಲಿಯೂ ಹೋಗಿಲ್ಲ. ಅವರ ಶರೀರವು ಮಾತ್ರ ನಮ್ಮಿಂದ ದೂರಹೋಗಿದೆ. ಅವರ ಆದರ್ಶಗಳನ್ನು ನಿಮ್ಮೆಲ್ಲರಿಗೆ ಹಂಚಿಹೋಗಿದ್ದಾರೆ. ಒಬ್ಬೊಬ್ಬರ ಹತ್ತಿರ ಒಂದೊಂದು ತರಹದ ಆದರ್ಶಗಳನ್ನು ಅವರು ಕಂಡುಕೊಂಡು, ಈ ಗುಂಪು ಯಾರೂ ಸಾಧಿಸಲಾರದಂತಹ ಮಹತ್ಕಾರ್ಯವನ್ನು ಸಾಧಿಸುತ್ತದೆ ಎಂದು ನನಗೆ ಬಹಳಷ್ಟು ಸಲ ಹೇಳಿದ್ದರು. ನಿವೆಲ್ಲರೂ ಕೂಡಿಕೊಂಡು ಅವರು ಹಾಕಿದ ಮಾರ್ಗದಲ್ಲಿ ನಡೆದು, ಅವರ ಮಹೋನ್ನತವಾದ ಹೊಸ ಸಮಾಜ ನಿರ್ಮಾಣದ ಕಾರ್ಯವನ್ನು ಮುಂದುವರಿಸಿ ಜಯವನ್ನು ಪಡೆಯಿರಿ. ಆ ಜಯವನ್ನು ನೀವೆಲ್ಲರು ಪಡೆದಾಗ ಅವರ ಆತ್ಮಕ್ಕೆ ಶಾಂತಿಸಿಗುವದು ನಾನು ಕೂಡಾ ನಿಮ್ಮಲ್ಲಿ ಒಬ್ಬನಾಗಿ ಕೆಲಸ ಮಾಡತೀನಿ. ಈಗತ್ರಿಕೆಯ ಸಂಪಾದಕನಾಗಿ ಮಧುಕರ ಮುಂದುವರೆಯಲಿ ಅವರು ಹಾಕಿಕೊಟ್ಟ ದಿಟ್ಟಹೆಜ್ಜೆಯತ್ತ ಮುಂದುವರೆಯೋಣ. ವಿನಾಕಾರಣ ನಾವು ಯಾರು ಕೋಪಗೊಳ್ಳದೆ, ಅದನ್ನು ನುಂಗಿ-ಕೊಂಡು ಬಂದ ವಿಪತ್ತಿಗೆ ಎದುರಾಗಿ ಹಿಂಜರಿಯದೇ ಸಾಗೋಣ ಎಂದು ಆನಂದನ ತಂದೆ ಎಲ್ಲರಿಗೂ ಸಮಾದಾನವನ್ನು ಹೇಳಿದರು.

ಎಲ್ಲರೂ ಅವರ ಮಾತನ್ನು ವಿರೂರದೆ ಒಪ್ಪಿಕೊಂಡರು ನಿಮ್ಮ ಮಾತನ್ನು ನಾವೆಲ್ಲರೂ ಚಾಚುತಪ್ಪದೇ ಒಪ್ಪಿಕೊಳ್ಳುವೆವು. ನಾವೆಲ್ಲರೂ ಚಿಕ್ಕವರು ನಮ್ಮ ಯಾವುದೇ ಸಮಸ್ಯೆಯ ಅಂತಿಮ ತಿರ್ಮಾನಕರಾಗಿ ನೀವು ಬಗೆಹರಿಸಬೇಕು, ಎಂದು ಮಧು ನುಡಿದಾಗ, ನಿವೆಲ್ಲ ತಾನುರಿದು ಜಗಕೆಲ್ಲ ಬೆಳಕನ್ನು ನೀಡುವ ದಿವ್ಯಜ್ಯೋತಿಗಳಷ್ಟು ನೀವು

ಕರೆದಾಗ ನಾನು ಓಡಿ ಬರುವೆ ಅದರ ಬಗ್ಗೆ ಕಾಳಜಿಬೇಡವೆಂದು ಹೇಳಿ, ಎಲ್ಲರೂ ಒಂದಾಗಿ ನ್ಯಾಯದ ಹಾದಿಯಲ್ಲಿ ಮಾಸ್ತರರು ಹಾಕಿಕೊಟ್ಟ ನಿಲುವೆಯಲ್ಲಿ ಮುಂದೆ ಸಾಗೋಣ, ಇನ್ನು ಮೇಲೆ ನಾವು ನೀವೆಲ್ಲರೂ ಬಹಳ ಜಾಗರೂಕತೆಯಿಂದ ಇರಬೇಕು. ಅಲ್ಲದೆ ಯಾರಿಗೂ ಹೆದರದೆ ನಮ್ಮ ದಿಟ್ಟವಾದ ಮಾರ್ಗದತ್ತ ಮುನ್ನಡೆದು ನಮ್ಮ ಬಲವನ್ನು ಇನ್ನೂ ಹೆಚ್ಚೆಚ್ಚು ಬೆಳಸಿ ನವಸಮಾಜವನ್ನು ನಿರ್ಮಿಸಿಯೇ ತೀರೋಣವೆಂದು ಪ್ರತಿಜ್ಞೆಮಾಡಿ ಅಲ್ಲಿಂದ ಎಲ್ಲರೂ ನಿರ್ಗಮಿಸಿದರು.

೧೭

ನಾಡಿನಾದ್ಯಂತ ಸಂಗಪ್ಪಮಾಸ್ತರರ ದುರ್ಮರಣದ ಬಗ್ಗೆ ನಾನಾ ಪತ್ರಿಕೆಗಳು ಬಡವರ ಬಂಧು, ಶ್ರಮಿಕರ ದೇವರು, ನ್ಯಾಯ ನಿಷ್ಠುರವಾದಿ, ದಿಟ್ಟಹೋರಾಟಗಾರ, ನವಸಮಾಜವನ್ನು ನಿರ್ಮಿಸ ಹೊರಟ ಧೀರ, ಅಪ್ಪಟ ಸಮಾಜವಾದಿ, ಮಾನವನ ಪರಿಶುದ್ಧವಾದ ಆತ್ಮವನ್ನು ಮನನ ಮಾಡಿಕೊಟ್ಟ ಮಹಾಮೇಧಾವಿ, ಶ್ರಮಜೀವಿಗಳ ದಾರಿದೀಪವೆಂದು ಅವರನ್ನು ಹೊಗಳಿದ್ದರಿಂದಲೇ ಅವರನ್ನು ಅವರ ವಿರೋಧಿಗಳು ಈ ದುರ್ಮರಣಕ್ಕೆ ಈಡುಮಾಡಿದರು. ಈ ಹೊಗಳಿಕೆ-ಯನ್ನು ಸಹಿಸದೇ ನಾಗನಗೌಡರ ಗುಂಪೂ ಸಹ ನಾನಾಪತ್ರಿಕೆಗಳಲ್ಲಿ ಮಾಸ್ತರರ ಆತ್ಮಕ್ಕೆ ಶಾಂತಿಯನ್ನು ಕೋರಿ ಬರೆದಿದ್ದರು. ಮಾಸ್ತರರ ಮರಣದ ಸುದ್ದಿಯನ್ನು ತಿಳಿದ ಮಧುಕರನ ಸೋದರಮಾವ ಹಾಗೂ ಮಂಜುಳಾ ಬಂದಿದ್ದರು. ಸೋದರಮಾವ ಮರುದಿನ ಮಧುಕರನಿಗೂ ಅವನ ಮಿತ್ರವೃಂದಕ್ಕೆ ಸಮಾಧಾನ ಹೇಳಿಹೋದರು. ಮಂಜುಳಾ ಒಂದುವಾರವಿದ್ದು ಒಂದುವಾರದಲ್ಲಿ ವಿಮಲಳ ಸ್ನೇಹವನ್ನಷ್ಟೇ ಅಲ್ಲದೆ ಭಾಗ್ಯ, ಕಮಲಳ ಸ್ನೇಹವೂ ಆಯಿತು. ಕಮಲಳ ಮನೆಯವರು ಮಧುಕರನ ತಂದೆ-ತಾಯಿಯನ್ನು ಕೊಂದವರು ಎಂಬ ಭಾವನೆಯಿಂದ

ಮೊದಮೊದಲು ಕಮಲಳ ಸಂಗಡ ಅಷ್ಟಕಷ್ಟೆ ಇದ್ದಳು. ನಂತರ ವಿಮಲಳಿಂದ ಕಮಲಳ ಗುಣವನ್ನು ಅರಿತು ಸ್ನೇಹವನ್ನು ಬೆಳಸಿದಳು ಕಮಲಳ ಒತ್ತಾಯದ ಮೇರೆಗೆ ಆಕೆಯ ಮನೆಗೂ ಸಹ ಹೋಗಿ ಬಂದಳು. ಅಲ್ಲಿ ಶಾಂತಮ್ಮನವರ ಪ್ರೀತಿ, ವಾತ್ಸಲ್ಯವನ್ನು ಕಂಡು ಸಂತೋಷಪಟ್ಟಳು. ಹೀಗೆ ಒಂದುವಾರವಿದ್ದು ಹೋಗುವಾಗ ಎಲ್ಲರನ್ನೂ ತನ್ನೂರಿಗೆ ಬರಲು ಹೇಳಿದಾಗ ನಿನ್ನ ಮದುವೆಗೆ ಎಲ್ಲರೂ ಬರುವ ದಾಗಿ ಹೇಳಿ ನಗುತ್ತ ಬಿಳ್ಕೊಟ್ಟಿದ್ದರು.

೧೮

ಗೋಪಾಲ ತನ್ನ ಇಲಾಖೆಯಲ್ಲಿ ನಿಷ್ಠುರ ನ್ಯಾಯವಾದಿಯೆಂದೇ ಹೆಸರುವಾಸಿಯಾಗಿದ್ದನು. ಕಾನೂನುಗಳನ್ನು ಅಭ್ಯಸಿಸಿ ಯಾರಿಂದಲೂ ತಾನು ಕಾನೂನು ಬಾಹಿರ ಮಾಡಿದರೆನ್ನಬಾರದೆಂದು ತಿಳಿದು ಕೆಲಸ ಗಳನ್ನು ಮಾಡುತ್ತಿದ್ದನು. ತನ್ನ ನಗರಕ್ಕೆ ಬಂದ ಒಂದೆರಡು ವಾರ ದಲ್ಲಿಯೇ ನಗರದ ಪ್ರಮುಖರನ್ನು ಹಾಗೂ ಸಂಘ-ಸಂಸ್ಥೆಯವರನ್ನು ಕರೆದು ಸಹಕರಿಸಬೇಕೆಂದು ಕೇಳಿಕೊಂಡನು. ನಗರದ ಸ್ವಚ್ಛತೆಯ ಕಡೆಗೆ ಬಹಳ ಗಮನವನ್ನು ತೆಗೆದುಕೊಂಡನು. ಅಲ್ಲದೆ ನಗರದ ಮುಖ್ಯಅಧಿಕಾರಿಯನ್ನು ಕರೆದು ಚರಂಡಿಗಳ ವ್ಯವಸ್ಥೆ, ಮಲ-ಮೂತ್ರದ ವ್ಯವಸ್ಥೆ, ಚಿಕ್ಕಪುಟ್ಟ ರಸ್ತೆಗಳ ರಿಪೇರಿಯ ಬಗ್ಗೆ ಮಾತನಾಡಿ ಒಂದೆರಡು ವಾರದಲ್ಲಿ ಬಗೆಹರಿಯಬೇಕು, ಇಲ್ಲವಾದಲ್ಲಿ ನಾನು ಮೇಲ್ಗಡೆ ರಿಪೋರ್ಟ ಮಾಡುವೆನು ಎಂದು ಹೇಳಿದರೂ ಸಹ ಅಧಿಕಾರಿ ಗಮನ ಕೊಡದೇ ಇರುವಾಗ, ಸಂಭಂಧಪಟ್ಟ ಅಧಿಕಾರಿಗಳಿಗೆ ಗೋಪಾಲನು ರಿಪೋರ್ಟಮಾಡಿದಾಗ ನಗರಸಭೆಯ ಸದಸ್ಯರುಗಳು ನಗರಾಭಿವೃದ್ಧಿ ಮಂತ್ರಿಗಳಿಗೆ ಗೋಪಾಲನ ಮೇಲೆ ಅನೇಕ ಆರೋಪಗಳನ್ನು ಹೊರಿಸಿದರು. ಗೋಪಾಲನ ನಿಷ್ಠೆಯನ್ನು ಅರಿತ ಮಂತ್ರಿಗಳು ಆರೋಪಗಳನ್ನು ನಿರಾಕರಿಸಿ ಸದಸ್ಯರಿಗೂ ಹಾಗೂ ಮುಖ್ಯಾಧಿಕಾರಿಗೂ ಛಿಮಾರಿಹಾಕಿ ಸಾರ್ವಜನಿಕ ಹಿತದ ಸಲುವಾಗಿ ದುಡಿಯುವತಾಗೆ

ಸಹಕಾರವನ್ನು ಕೋಡಬೇಕು. ಅವರ ಸಂಗಡ ನೀವೂ ಸಹ ದುಡಿಯಬೇಕು. ಅದೆಲ್ಲವನ್ನು ಬಿಟ್ಟು ಅವರಮೇಲೆ ದೂರು ತಂದಿರುವಿರಲ್ಲ ನಿಮಗೆ ನಾಚಿಕೆ ಆಗುವದಿಲ್ಲವೆ. ಗೋಪಾಲ ಮಾನನಷ್ಟ ಮೊಕದ್ದಮೆ ಹಾಕಿದರೆ ಎಲ್ಲರೂ ಜೈಲಿಗೆ ಹೋಗಬೇಕಾಗುವದು ಎಂದು ಹೇಳಿ ಕಳುಹಿಸಿದ್ದರು.

ಅದನ್ನು ಹೊಂಬೆಳಕು ಪ್ರಕಟಿಸಿತ್ತು. ಕಮಲ ಅದನ್ನು ಒದುತ್ತ ಕುಳಿತ್ತಿದ್ದಳು. ಗೋಪಾಲ ಒಳಗಿನಿಂದ ಬಂದರೂ ಸಹ ಕಮಲ ಅವನನ್ನು ಗಮನಿಸದೇ ಓದುತ್ತಿರುವಾಗ, ಏನಮ್ಮ ಕಮಲ ವಿಷಯ ಪೇಪರಿನಲ್ಲಿ ಎಂದಾಗ, ಒಂದು ನಿಮಿಷ ತಡಿಹೇಳತೀನಿ ಎಂದು ಪೇಪರನ್ನು ಓದಿ ಮುಗಿಸುವಷ್ಟರಲ್ಲಿ ದೀಪಕ ಒಳಗಿನಿಂದ ಬಂದು ಏನಿದೆ ಪೇಪರಿನಲ್ಲಿ ವಿಶೇಷ ಎನ್ನಲು, ತಗೋ ಓದು ಸಂತಸಪಡು ನಮ್ಮ ನಗರದ ಬುದ್ಧಿಜೀವಿಗಳ ಮಹಾಕೆಲಸವನ್ನು ಎಂದು ನುಡಿದು ಪೇಪರನ್ನು ಕೊಡುವಳು. ದೀಪಕ ಓದಿ ಬರೀ ಸುಳ್ಳಿನ ಕಂತೇನೆ ಬರಿತಾನೆ, ಬರಿಯದೇ ಹೋದರೆ ಹೊಟ್ಟೆ ತುಂಬಬೇಕಲ್ಲ. ಹೇಗಾದರೂ ಮಾಡಿ ಪತ್ರಿಕೆ ಮಾರಾಟವಾದರೆ ಸಾಕು. ಎಂದು ವ್ಯಂಗವಾಗಿ ನುಡಿದಾಗ, ಕಮಲ ಪತ್ರಿಕೆಯನ್ನು ತೆಗೆದುಕೊಂಡು, ಈ ಪತ್ರಿಕೆ ಹೊಟ್ಟೆಪಾಡಿಗಾಗಿ ಉದಯಿಸಲಿಲ್ಲ. ಸತ್ಯದ ಬಲವಿನ ದಾರಿಯನ್ನು ತೋರಿಸಲು ಉದಯಿಸಿದೆ. ಈ ಪತ್ರಿಕೆ ಇಷ್ಟುಬೇಗನೆ ಹೆಸರುಗಳಿಸಬೇಕಾದರೆ ನಿಷ್ಪಕ್ಷಪಾತ, ನಿಷ್ಟೆ ಮುಖ್ಯ.

ಅಂದರೆ ಈ ವಿಷಯ ಚರ್ಚಿಸುತ್ತಿರುವಾಗ ಇವನನ್ನು ಕರೆದಿದ್ದ-ರಂತೆ ಕಾಣುತ್ತೆ ಬಾರಪ್ಪ ಈ ವಿಷಯಾನ ಪ್ರಕಟಿಸಂತ, ಎಂದು ದೀಪಕ ಹಾಸ್ಯಾಸ್ಪದವಾಗಿ ನುಡಿದಾಗ, ಯಾರು ಯಾರನ್ನು ಕರೆಯುವದಿಲ್ಲ ಅವರ ಚರ್ಚೆಯನ್ನು ಪತ್ತೆಹಚ್ಚಿ ಸತ್ಯಾಂಶವನ್ನು ಪ್ರಕಟಿಸು-ವದು ಬುದ್ಧಿವಂತಿಕೆ ಎಂದು ಕಮಲಾ ನುಡಿದಾಗ, ಇಂಥಹ ಬುದ್ಧಿವಂತರು ಬಹಳ ಜನರಿದ್ದಾರೆ ನಮ್ಮ ಹತ್ತಿರ ಹಣತೋರಿಸಿದರೆ

ಕಾಲಡಿಬಂದು ಬೀಳತಾರೆ, ಇದೇ ಒಂದು ಸಲ ಆರಿಸಿಬಂದ ಆ ನಗರಾಭಿವೃದ್ಧಿ ಮಂತ್ರಿ ನಮ್ಮ ಮಂತ್ರಿಗಳ ಮೇಲಿನ ಸೇಡಿಗಾಗಿ ಅಂದಿದ್ದಾರೆ. ನಮ್ಮ ಮಂತ್ರಿಗಳು ನಾಲ್ಕುಸಲ ಆರಿಸಿಬಂದರೂ ಸ್ವಲ್ಪವೂ ಗರ್ವವಿಲ್ಲ. ನಮ್ಮ ಮಂತ್ರಿಗಳ ಅಂಗುಷ್ಟದಷ್ಟು ಮರ್ಯಾದೆ ಅವನಿಗಿಲ್ಲ ಎಂದು ದೀಪಕ ನುಡಿದಾಗ, ನಿಮ್ಮ ಮಂತ್ರಿಗಳ ಮಹಿಮೆ ಹೋದ ತಿಂಗಳ ಹೊಂಬೆಳಕಿನಲ್ಲಿ ಬಂದಿತ್ತಲ್ಲ. ನಿಮ್ಮ ಮಂತ್ರಿಗಳು ಈ ಸಲ ಆರಿಸಿಬರಲಿ. ಇಂಥಹ ಕಂತ್ರಿಮಂತ್ರಿಗಳು ಆರಿಸಿಬರುವದರಿಂದಲೇ ನಮ್ಮ ದೇಶ ಈ ಗತಿಗೆ ಬಂದಿದೆ. ಪಾಪಿಗಳು ಸುಖ, ಶಾಂತಿ ನೆಮ್ಮದಿ ಯನ್ನೆಲ್ಲ ಹಾಳುಮಾಡಿದರು. ಜಾತ್ಯಾತೀತ ರಾಷ್ಟ್ರದಲ್ಲಿ ಜಾತಿಯ ಗೊಂದಲವನ್ನು ಉಂಟುಮಾಡಿ, ಪ್ರತಿಯೊಂದು ಸಮಾಜಕ್ಕೂ ಮತೀಯ ಭಾವನೆಯನ್ನು ತುಂಬಿ, ಜನರಮಧ್ಯ ನಾನಾ ತರಹದ ಭಿನ್ನಾಭಿ- ಪ್ರಾಯಗಳನ್ನು ತಂದು, ಜಗಳವಾಡುವಂತೆ ಮಾಡಿದರು. ಜನರಿಗೆ ಸುಳ್ಳುಹೇಳಿ ಮತವನ್ನು ಕಬಳಿಸಿ ಜನಸಾಮಾನ್ಯರು ಬದುಕದಂತೆ ಮಾಡಿದರು. ಸಾಯುವವರೆಗೂ ಬದುಕುವ ಹಾಗೆ ಆಸ್ತಿಯನ್ನು ಮಾಡಿಕೊಂಡರು. ದೇಶದ ಪ್ರಗತಿಪರ ಕಾರ್ಯಗಳಂತೂ ಕನಸಿನಲ್ಲಿಯೂ ನೆನೆಸಲಿಲ್ಲ. ಇಂಥಹ ನೀಚರನ್ನು ಹೀಗೆಯೇ ಮುಂದುವರೆಯಲು ಬಿಟ್ಟರೆ ದೇಶವನ್ನು ಯಾರಿಗಾದರು ಮಾರಿಬಿಡುವರು. ಎಂದು ಕಮಲ ಕೋಪದಿಂದ ನುಡಿದಳು.

ಬರೀ ಹಿಯಾಳಿಸುವದೇ ನಿಮ್ಮ ಕೆಲಸವಾಯ್ತು. ಬೇರೊಬ್ಬರನ್ನು ಹಿಯಾಳಿಸಿದರೆ ಅವರ ವರ್ಚಸ್ಸು ಕಡಿಮೆಯಾಗುವುದಿಲ್ಲ. ಪೇಪರದಲ್ಲಿ ನಾಲ್ಕಕ್ಷರ ಗೀಚಿದರೆ ರಾಜಕೀಯ ಮಾಡಿದಂತಲ್ಲ. ಚುನಾವಣೆಯಲ್ಲಿ ಗೆದ್ದು ರಾಜಕೀಯ ಮಾಡಬೇಕು. ಧೈರ್ಯವಿದ್ದರೆ ನಗರಸಭೆಯ ಚುನಾವಣೆಗೆ ನಿಂತು ಆರಿಸಿಬರಲಿ ಆಗ ಅವರ ಹಣೆಬರಹ ಗೊತ್ತಾಗುವದು ಎಂದು ದೀಪಕ ನುಡಿದಾಗ, ಮೊದಲು ನಿಮ್ಮವರು ಹಣೆಬರಹನ್ನು ನೋಡಿಕೊಳ್ಳಲು ತಯಾರಾಗಲಿ, ಸಾರ್ವಜನಿಕರ ಆಸ್ತಿಪಾಸ್ತಿಗಳನ್ನು ನುಂಗಿ ನೀರು ಕುಡಿದ ಗೂಬೆಗಳಿಗೆ ಜನ ಸರಿಯಾದ ಪಾಠ ಕಲಿಸ್ತಾರೆ. ಶ್ರಮಜೀವಿಗಳ ತೊಳ್ಬಲಗಳಲ್ಲಿ ಬೃಹದಾಕಾರವಾಗಿ

ಶಕ್ತಿ ಬೆಳೆದಿದೆ, ಅವರ ರಕ್ತದ ಕಣಗಳಿಂದ ನಿರ್ಮಿಸಿಕೊಂಡ ಈ ಅರಮನೆಗಳನ್ನು ಕಟ್ಟಿದವರನ್ನೆ ಹೀನದೃಷ್ಟಿಯಲ್ಲಿ ಕಂಡ ನಿಮ್ಮಂಥಹ ಮತಿಹೀನರಿಗೆ ಜನ ಸರಿಯಾದ ಪಾಠ ಕಲಿಸ್ತಾರೆ ಎಂದು ಕಮಲ ನುಡಿದಾಗ, ಮತಿಹೀನರು ನಾವಲ್ಲ, ಅವನು ಮತಿಹೀನ, ರಾಸ್ಕಲ್ ಜನರೆದುರು ಏನಾದರೊಂದು ಸುಳ್ಳು ಬರೆದು ಹೊಟ್ಟೆತುಂಬಿಸಿಕೊಳ್ಳ-ತಾಯಿದಾನಲ್ಲ ಅವನು, ಎಂದು ಪೇಪರನ್ನು ಹರಿದು ಹಾಕುವನು. ನೀವೇ ಗೂಭೆಗಳು ನಿಮ್ಮ ಹತ್ತಿರ ಧೈರ್ಯವಿದ್ದರೆ ಪತ್ರಿಕೆ ಮೇಲೆ ಕೇಸ್ ಹಾಕು ನಿನ್ನ ಪೌರುಸಾನ ಪೇಪರ ಮೇಲೆಕೆತೋರಸ್ತಿಯಾ ಇದನ್ನು ನಾನು ದುಡ್ಡುಕೊಟ್ಟು ತಂದೋಳು ಮರ್ಯಾದೆಯಿಂದ ಬೇರೆ ಪೇಪರ ತಂದುಕೊಡು. ಎಂದು ಕಮಲ ಕೋಪದಿಂದ ನುಡಿಯಲು, ನಿನಗೆಲ್ಲಿಂದ ಬಂತು ಹಣ ನಾವು ದುಡಿದ ದುಡ್ಡಿದು ಒಂದೆರಡು ವರ್ಷದಲ್ಲಿ ಬಾಳ ಮಾತ ಕಲಿತ್ತಿದ್ದಿಯಾ. ಹಿರಿಯ-ರೆಂಬುದು ನಿನ್ನ ಗಮನಕ್ಕೇ ಬರೊಲ್ಲ. ಆ ಲಫಂಗನ ಜೊತೆ ಸೇರಿ ಕೊಂಡು ನಮ್ಮ ಮರ್ಯಾದೆನೆಲ್ಲ ಹಾಳಮಾಡತಾಯಿದಿಯಾ ಎಂದು ದೀಪಕ ನುಡಿದಾಗ, ನೀನು ಬಹಳೇ ದುಡಿತಾಯಿದ್ದಿಯಾ, ನೀನು ದುಡಿದದ್ದರ ನಾಲ್ಕುಪಟ್ಟು ನಿನ್ನ ಚೈನಿಗೆಬೇಕು. ನಾನು ನನ್ನ ಗೋಪಣ್ಣನ ದುಡ್ಡಲ್ಲಿ ಬದುಕತಾಯಿದ್ದೀನಿ. ನಿನ್ನ ಬೆದರಿಕೆನೆಲ್ಲ ನಾಳೆ ಬರುವ ನಿನ್ನ ಹೆಂಡತಿಗೆ ತೋರಿಸು. ಈಮನೆಯಲ್ಲಿ ನಿನಗೆಷ್ಟು ಹಕ್ಕು ನನಗೂ ಇದೆ ಎಂಬುದನ್ನು ಮರೀಬೇಡ ನೀನೇನೆ ಮಾತಾಡಿದರು ನನ್ನ ಬಗೆ ಮಾತಾಡು ಮಧುಕರನ ವಿಚಾರವಾಗಿ ಏನಾದರೂ ಅಂದ್ರೆ ಪರಿಣಾಮ ಚನ್ನಾಗಿರಲ್ಲ ನೋಡು ಎಂದು ಕಮಲಾ ಕೋಪದಿಂದ ನುಡಿಯು-ತ್ತಿರುವಾಗ, ಶಾಂತಮ್ಮನವರು ಬಂದು ಬಾರೇ ಕಮಲಾ ಸ್ನಾನ-ಮಾಡು ಕಾಲೇಜಿಗೆ ಹೊತ್ತಾಗುವದಿಲ್ಲವೆ, ನೀವಿಬ್ಬರೂ ಎಂಥಹ ಅಣ್ಣ-ತಂಗಿಯರೇ ಶಿವಶಿವ ಸಾಕಾಗಿ ಹೋಗಿದೆ. ಬಾ ಗೋಪಾಲ ನೀನು ತಿಂಡಿ ತಿಂದು ಕೆಲಸಕ್ಕೆ ಹೋಗು ಹೇಳಿಯಾಯ್ತು ಗೋಪಾಲ ಎದ್ದು ಹೋಗಲು ಎಲ್ಲರೂ ಅವನ ಹಿಂದೆಯೇ ಹೋಗುವರು.

ಗೋಪಾಲನಿಗೆ ತಿಂಡಿಯನ್ನು ತಂದುಕೊಟ್ಟು ಕೇಳಿದೆಯ ಗೋಪಾಲ

ಅವರ ಜಗಳಾನ, ಅವರಿಬ್ಬರಿಗೂ ವಾದಪ್ರಾರಂಭವಾದರೆ ಮುಗಿಯು ವದೇ ಇಲ್ಲ. ಹಿಂದೆ ಒಂದೆರೆಡು ಸಲ ದೀಪಕ ಕಮಲಾಳಿಗೆ ಹೊಡೆದದ್ದು ಉಂಟು. ಅಂದು ಕಾಲೇಜನಲ್ಲಿ ಆದಾವದೋ ಚುನಾವಣೆ ಯಿತ್ತಂತೆ ಈತನ ವಿರುದ್ಧ ನಿಂತವರ ಸಂಗಡ ತಿರಿದಳಂತೆ ಆಗ ತಂದೆ ಮಗರಿಬ್ಬರೂ ಸೇರಿಕೊಂಡು ಬೈದಿದ್ದೆ ಬೈಯ್ದಿದ್ದು. ಬೇಡ ಮಗಳ ಮೇಲೆ ನಿಮ್ಮಪ್ಪ ಕೈಮಾಡಿದರು. ಅದನ್ನೇ ಮನಸ್ಸಿನಲ್ಲಿಟ್ಟು ಕೊಂಡು ನಾಲ್ಕಾರದಿನ ಊಟನಿದ್ರೆ ಮಾಡಲಿಲ್ಲ. ಅಂದಿನಿಂದ ಬೆಳಿತಾನೇ ಇದೆಯೇ ವಿನಹ ಕಡಿಮೆಯಾಗತಾಯಿಲ್ಲ. ಎಂದು ಉಸಿರನ್ನು ಬಿಡುವರು ಗೋಪಾಲ ಅರ್ಧಮರ್ಧ ತಿಂಡಿಯನ್ನು ತಿಂದು ಏಳಲು, ಅದೇಕೋ ಪೂರ್ತಿ ತಿಂಡಿ ತಿನ್ನು ಮತ್ತೆ ಊಡಕ್ಕೊ ಬೇಗಬರಲ್ಲ ಎನ್ನುತ್ತ ತಡಿ ಇನ್ನಿಷ್ಟ ಹಾಲ ತರತೀನಿ ಎನ್ನಲು ಬೇಡಮ್ಮ, ಸಾಕಷ್ಟ ಎಂದು ಗೋಪಾಲ ನುಡಿದು ಮೇಲೆದ್ದು ತನ್ನ ರೂಮಿಗೆ ಹೋಗಿ ಬಟ್ಟೆಯನ್ನು ಹಾಕಿಕೊಂಡು ಕಮಲಳ ರೂಮಿನಲ್ಲಿ ನೋಡಿ ಹೋಗುವನು.

೧೯

ನಗರದ ಚುನಾವಣೆ ಕೇವಲ ಮೂರು ದಿವಸ ಉಳಿದಿದೆ. ಎಲ್ಲ ಕಡೆಗೂ ಪ್ರಚಾರ ಬರದಿಂದ ಸಾಗಿದೆ. ಮುಖ್ಯವಾಗಿ ಎರಡು ಬಣಗಳು ಕಣದಲ್ಲಿ ಇಳಿದಿವೆ. ಒಂದು ಗುಂಪಿನಲ್ಲಿ ನಾಗನಗೌಡರು, ಕುಮಾರಗೌಡರು, ರೇವಣ್ಣ, ಕರೀಮುಖಾನ, ದೀಪಕ, ಕಾಮೇಶ, ದೇಸಾಯಿ, ಹಾಗೂ ಕಾಮಿನಿಯಿದ್ದು, ಸುಮಾರು ಹದಿನೈದು ವರ್ಷ ಗಳವರೆಗೆ ಆಡಳಿತೆಯನ್ನು ಮಾಡಿ, ನಗರದಲ್ಲಿ ಸಾರ್ವಜನಿಕರ ಸಲುವಾಗಿ, ಕಾಲೇಜ ಉಧ್ಯಾನ್ಯವನ ಹೀಗೆ ಹೆಸರಾಂತ ಕೆಲಸಗಳನ್ನು ಮಾಡಿದ್ದೇವೆ. ಬಡಜನರಿಗೆ ಸಾಕಷ್ಟು ರೀತಿಯಿಂದ ಸರಕಾರದಿಂದ ಅನುಕೂಲಗಳನ್ನು ಒದಗಿಸಿಕೊಟ್ಟಿದ್ದೇವೆ. ಅಲ್ಲದೆ ವಿರೋಧ ಗುಂಪಿನಲ್ಲಿ ಬರೀ ಹುಡುಗರೆ, ಇದ್ದಾರೆ, ಅವರಿಗೆ ಯಾವ ರಾಜಕೀಯದ ಅನುಭವ ವಿಲ್ಲ. ಯಾವದಾದರೂ ಸರಕಾರಿ ಕಛೇರಿಗೆ ಹೋಗಿ ಹೇಗೆ ಕೆಲಸ

ಗಳನ್ನು ಮಾಡಿಸಿಕೊಂಡು ಬರಬೇಕೆಂಬುದುಗೊತ್ತಿಲ್ಲ. ಹೀಗಿರುವಾಗ ಬರಿ ಸ್ಕೂಲಿಗೆ ಹೋಗಿ ನಾಲ್ಕಕ್ಷರ ಬರೆದರೆ ರಾಜಕೀಯ ಬರಲಾರದು ಅದಕ್ಕೆ ಅನುಭವ ಮುಖ್ಯ, ರಾಜಕೀಯ ಸೂತ್ರವನ್ನು ಅರಿಯದೇ ರಾಜಕೀಯ ಮಾಡಲುಬಂದರೆ ಮುಗ್ಗರಿಸಿ ಬೀಳುವದಂತೂ ಖಚಿತ. ಸಾಯುವವರೆಗೂ ನಾವೇ ರಾಜಕೀಯ ಮಾಡಬೇಕೆಂದು ನಮ್ಮ ಉದ್ದೇಶವಲ್ಲ. ನಮ್ಮಲ್ಲಿಯೂ ಯುವಕರಿದ್ದಾರೆ ಅವರನ್ನು ರಾಜಕೀಯದ ಪಟುಗಳನ್ನಾಗಿ ಮಾಡುವದು ನಮ್ಮ ಕರ್ತವ್ಯ. ನಮ್ಮ ಹತ್ತಿರ ಅವರುಬೇರೆ ನಾವುಬೇರೆ ಎಂಬ ಬೇದಭಾವವಿಲ್ಲ. ಆ ಗುಂಪಿನವರೂ ನಮ್ಮ ಸಂಗಡ ಸೇರಿಕೊಂಡರೆ ಎಲ್ಲರೂ ಸೇರಿ ಈ ನಗರವನ್ನು ಒಂದು ಸುಂದರವಾದ ನಗರವನ್ನಾಗಿ ಮಾಡಿ ನಗರದ ಜನರ ಸಮಸ್ಯೆಗಳನ್ನು ಎಲ್ಲರೂ ಸೇರಿ ಬಗೆಹರಿಸೋಣ ಎಂದು ಹೇಳಿದರೂ ಅವರಿಗೆ ಒಪ್ಪಿಗೆ ಆಗಲಿಲ್ಲ. ತಮ್ಮದೇ ಒಂದು ಗುಂಪನ್ನು ಕಟ್ಟಿಕೊಂಡು ನಗರದಲ್ಲಿ ಒಂದು ಕಹಿವಾತಾವರಣವನ್ನು ನಿರ್ಮಿಸಿದ್ದಾರೆ ಎಂದು ದೂರುತ್ತ, ಎಲ್ಲರೂ ನಮ್ಮ ಗುಂಪಿಗೆ ಮತವನ್ನು ಕೊಡಿರೆಂದು ಕೇಳುತ್ತಿದ್ದರು.

ಇದರೆ ಮಧುಕರನ ಗುಂಪು ಚುನಾವಣೆಯ ಕೆಲಸವನ್ನು ಬಹಳ ಜಾಗರೂಕತೆಯಿಂದ ಮಾಡುತ್ತಿದ್ದರು. ಕಾರ್ಯಕರ್ತರೆಲ್ಲರೂ ಮನೆಮನೆಗೆ ಹೋಗಿ ಹಿಂದಿನ ಎಲ್ಲ ಅನ್ಯಾಯಗಳನ್ನು ಮತದಾರರ ಗಮನಕ್ಕೆತಂದು ಅವರ ಮನವನ್ನು ಸಂಪೂರ್ಣ ತಮ್ಮೆಡೆಗೆ ಒಲಿಸಿ-ಕೊಳ್ಳುತ್ತಿದ್ದರು. ಮಧುಕರನ ಗುಂಪಿನ ಪರವಾಗಿ ಕಮಲಾ ವಿಮಲಾ, ನಂದನಾ ಹಾಗೂ ಭಾಗ್ಯ ಸೇರಿಕೊಂಡು ಕೇರಿ ಕೇರಿಗಳಲ್ಲಿ ಹೊಗಿ ಚಿಕ್ಕ ಪುಟ್ಟ ಭಾಷಣಗಳನ್ನು ಮಾಡುತ್ತ ಮತದಾರರ ಮನವನ್ನು ಸೆಳೆದುಕೊಳ್ಳುತ್ತಿದ್ದರು.

ಅದರಂತೆ ದೀಪಕ, ಕಾಮೇಶ ಹಾಗೂ ಕಾಮಿನಿಯವರು ಕೇರಿಗಳಲ್ಲಿ ಹೋಗಿ ನಮ್ಮ ಹಿರಿಯರು ಇಲ್ಲಿಯವರೆಗೆ ಸಾಕಷ್ಟು ಜನಕಲ್ಯಾಣದ ಕೆಲಸಗಳನ್ನು ಮಾಡಿರುವರು. ನಮ್ಮ ಸಮಾಜದ ಮುಖಂಡರ ಮೇಲೆ ಅಲ್ಲಸಲ್ಲದ ಆರೋಪಗಳನ್ನು ಹೊರಿಸಿ, ಹೊಸ ಸಮಾಜ ನಿರ್ಮಾಣದ

ಬಗ್ಗೆ ವಿರೋಧ ಗುಂಪಿನವರು ಬಹಳವಾಗಿ ಮಾತನಾಡುತ್ತಿದ್ದಾರೆ. ಇದೇ ಊರಿನಲ್ಲಿ ನೂರಾರು ಮೇಧಾವಿಗಳು ಜನಿಸಿ ಸಾಕಷ್ಟು ಮಹತ್ಕಾರ್ಯಗಳನ್ನು ಮಾಡಿತೋರಿಸಿದರು. ನಮ್ಮ ದೇಶದಲ್ಲಿ ಅನೇಕ ಕೈಗಾರಿಕೋದ್ಯಮಗಳನ್ನು ಸ್ಥಾಪಿಸಿ ಹೊರದೇಶಗಳಲ್ಲಿ ನಮ್ಮ ದೇಶದ ಕೀರ್ತಿ ಹರಡುವಂತೆ ಮಾಡಿದ್ದಾರೆ. ಇಂಥಹ ದೇಶದವರಾದ ನಾವು ಅವರು ಹಾಕಿದ ದಾರಿಯಲ್ಲಿ ಮುಂದೆ ಸಾಗಬೇಕು. ಒಂದು ಸಮಾಜ ವನ್ನು ಕಟ್ಟಲು ನಮ್ಮ ಹಿರಿಯರು ಎಷ್ಟು ಕಷ್ಟಗಳನ್ನು ಅನುಭವಿಸಿ-ದ್ದಾರೆ ಎಂಬುದು ಬಹುಶಃ ಅವರಿಗೆ ತಿಳಿದಿರಲಿಕ್ಕಿಲ್ಲ. ಹೀಗೆ ಭಾಷಣ ಗಳನ್ನು ಮಾಡುತ್ತಿದ್ದರು.

ಆನಂದ ಹಾಗೂ ಬಸವರಾಜ, ವಿಮಲಾ ಸಹ ನಗರದ ಮೂಲೆ ಮೂಲೆಗೆ ಹೋಗಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದರೂ, ನಮ್ಮ ನಗರದ ಜನರಿಗೆ ಅದರ ಅರ್ಥವೇ ಆಗಿಲ್ಲ. ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸರಿಸಮಾನರು. ನಮ್ಮ ದೇಶದಲ್ಲಿ ಶ್ರೀಮಂತರು ಹೆಚ್ಚು ಹೆಚ್ಚಾಗಿ ಶ್ರೀಮಂತರಾಗುತ್ತಲೇ ಹೊರಟಿರುವರು. ಹಿಂದಿನವರು ಸಾರ್ವಜನಿಕರಿಗೆ ಸಾಕಷ್ಟು ಮೋಸವನ್ನು ಮಾಡಿದ್ದಾರೆ. ಈ ಸಲವೂ ಸಹ ಅದಕ್ಕೆ ಅವಕಾಶವನ್ನು ಕೊಡವೇ! ತಮ್ಮ ಅತ್ಯಮೌಲ್ಯವಾದ ಮತವನ್ನು ನಮ್ಮ ಗುಂಪಿನವರಿಗೆ ಕೊಡಲು ಕೇಳಿಕೊಳ್ಳುತ್ತಿದ್ದರು. ನಾವು ಚುನಾವಣೆಯಲ್ಲಿ ಆರಿಸಿಬಂದರೆ ಊರಿನ ಪ್ರಗತಿಯ ಬಗೆ ಹೋರಾಡುತ್ತೇವೆ. ಹೀಗೆ ಮಧುಕರನ ಗುಂಪು ತನ್ನ ಭಾಷಣ ಗಳಲ್ಲಿ ತಮ್ಮ ಪ್ರಚಾರ ಭಾಷಣ ಮಾಡುತ್ತ ತಮ್ಮ ಗುರಿಗಳನ್ನು ಚುನಾವಣೆಯ ಪ್ರಣಾಳಿಕೆಯನ್ನು ಜನರೆದುರು ಮುದ್ರಿಸಿ ಹಂಚು ತ್ತಿದ್ದರು.

೨೦

ನಗರದ ಈ ಬಿಸಿವಾತಾವರಣ ಬಹಳ ಜನರ ಮೆಚ್ಚುಗೆಯನ್ನು ಪಡೆದಿತ್ತು. ಸುಮಾರು ಎರಡು ವರ್ಷಗಳಿಂದ ನಡೆಯದೇಯಿದ್ದ ಈ ನಗರದ ಚುನಾವಣೆ ಈಗ ನಡೆದು, ಜನರ ಮನದಲ್ಲಿ ಹೊಸ

ಹುರುಪನ್ನು ತಂದಿತ್ತು. ನಗರದ ಜನ ಮಧುಕರನ ಬುದ್ಧಿಮತ್ತೆ, ಮಾತಿನ ಚಾತುರ್ಯತೆ, ಮಾತನಾಡುವಾಗ ಪದಗಳ ಹೊಂದಾಣಿಕೆ ಯಾರಿಗೂ ಹೊಗಳದ ಯಾರನ್ನೂ ತೆಗಳದ ಈತನ ನುಡಿಗಳನ್ನು ಬಹಳ ಜನರು ಮೆಚ್ಚುತ್ತಿದ್ದರು. ಅತ್ಯಂತ ನುರಿತ ರಾಜಕೀಯ ಮೇದಾವಿಗಳು ಈತನ ಬಾಯಿಂದ ಬರುವ ಆನೇಕ ಅರ್ಥಗರ್ಬಿತವಾದ ವಾಕ್ಯಗಳನ್ನು ಪುನಃ ಪುನಃ ಕೇಳಿ ತಿಳಿದುಕೊಳ್ಳುತ್ತಿದ್ಧರು. ಶ್ರಮಜೀವಿಗಳಂತೂ ಈ ನಗರದಲ್ಲಿ ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಂಡಿದ್ದಲ್ಲದೆ, ತಾವು ಮನುಷ್ಯರೂ ಎಂಬುದನ್ನು ಅರ್ಥ ಮಾಡಿಕೊಟ್ಟ ಈ ಸಮಾಜವಾದಿ ಗುಂಪಿಗೆ ತಮ್ಮ ಪ್ರಾಣವನ್ನೇ ಕೊಡಲು ಸಿದ್ಧರಿದ್ದರು.

ಭೂಮಿಯ ಮೇಲೆ ಜನಿಸಿದ ಮಗುವಿಗೆ ಬೇಕಾಗುವ ತೊಟ್ಟಿಲದಿಂದ ಹಿಡಿದು ಅದರ ಆಟ-ಪಾಠಕ್ಕೆ ಬೇಕಾಗುವ ವಸ್ತುಗಳನ್ನು ಹಿಡಿದು, ಆ ಮಗು ಬೆಳೆದುದೊಡ್ಡವನಾಗಿ ಸಂಸಾರಿಕನಾಗಿ ಕೊನೆಗೆ ತಾನು ಇಹಲೋಕವನ್ನು ಬಿಟ್ಟು ಹೊರಡುವಾಗ ಬೇಕಾಗುವ ವಿಮಾನವನ್ನು ತಯಾರಿಸುವವರು ಕೆಲಸಗಾರರು, ಈ ತೆರನಾದ ಕೂಲಿಕಾರರ ಜೀವಂತ ಶಕ್ತಿಯನ್ನು ಕಡೆಗಾಣಿಸಿದ ಈ ಸಮಾಜವಾವನ್ನು ತಾವು ಬದಲಾಯಿಸಬೇಕಾಗಿದೆ. ಈ ತೆರನಾದ ಪಶುತ್ವವುಳ್ಳ ಸಮಾಜವನ್ನು ಬದಲಾಯಿಸಬೇಕಾಗಿದೆ. ದೇವರ ಹೆಸರಿನಲ್ಲಿ ನಡೆಯುವ ಹೀನಕೃತ್ಯಗಳನ್ನು ತಿರಸ್ಕರಿಸದೇ, ನಮ್ಮ ಸಮಾಜ ಅದನ್ನು ಬಯಸುತ್ತದೆ. ಯಾವ ದೇವ ತನ್ನ ಆಹಾರಕ್ಕೆ ಕುರಿಬೇಕು., ಕೋಣಬೇಕು, ಅಲ್ಲದೇ ನನ್ನ ಹೆಸರಿನಲ್ಲಿ ಹುಡುಗಿಯರನ್ನು ದಾಸಿಯರನ್ನಾಗಿ ಬಿಡಿ-ಯೆಂದು ಕೇಳುವುದಿಲ್ಲ. ಜನರು ತಮ್ಮ ಬಾಯಿಯ. ರುಚಿಯನ್ನು ಬದಲಿಸುವ ಸಲುವಾಗಿ ಮಾಡಿಕೊಂಡ ಸೂತ್ರವಷ್ಟೇ ಕೆಲವೊಂದು ಕಾಮಾಂತುರರು ತಮ್ಮ ಹೆಂಡಂದಿರು ರೋಗಿಯಾಗಿದ್ದಾಗ ತಮ್ಮ ಹಸಿವನ್ನು ತೀರಿಸಿಕೊಳ್ಳಲು ಒಂದು ಹೆಣ್ಣು ಬೇಕಾಗಿತ್ತು, ಮತ್ತೊಬ್ಬರಿಗೆ ತರತರಹದ ಹೆಂಗಸರ ಸಂಗವನ್ನು ಬಯಸುವದು

ಒಂದು ಅಭ್ಯಾಸವಾದ್ದರಿಂದ, ಅಲ್ಲದೆ ಕೆಲವೊಂದು ಕಾಮುಕರಿಗೆ ಒಳ್ಳೆಯ ಮನಸುಳ್ಳ ಹೆಂಗಸರು ಬಲಿಯಾಗುವದನ್ನು ತಪ್ಪಿಸುವ ಸಲುವಾಗಿ, ಕೀಳು ಜಾತಿಯ ಹೆಣ್ಣೊಂದನ್ನು ದೇವದಾಸಿ ಎಂದು ಕರೆದು ಅವಳಿಂದ ಲಾಭವನ್ನು ಪಡೆದುಕೊಳ್ಳುತ್ತಿದ್ದರು. ಇದು ನ್ಯಾಯವೇ ? ಅತೀ ಕಾಮುಕನಿಗೆ ಶಿಕ್ಷೆಯನ್ನು ಏಕೆ ಕೊಡುವ ವ್ಯವಸ್ಥೆ ಈ ಸಮಾಜದಲ್ಲಿಲ್ಲ.? ದೇವದಾಸಿಯರಾಗಲು ಕೀಳುಜಾತಿಯವರೇಕೆಬೇಕು.? ಮಾನವನ ಮೂಲವಾದ ಮನು ಈ ಮಾನವ ಇಂಥಹ ಜಾತಿಯವನು, ಇಂಥಹ ಆಹಾರವನ್ನೇ ತಿನ್ನಬೇಕು. ಇಲ್ಲಿಯೇ ವಾಸವಾಗಬೇಕು ಎಂದು ಏನಾದರೂ ಬರೆದಿರುವನೇ ? ಹಾಗಾದರೆ ಅದೆಲ್ಲವನ್ನು ಮಾಡಿದವರು ಯಾರು ಈ ಸಮಾಜದವರಲ್ಲವೆ ? ಜಾತಿ, ಮತ, ಪಂಥಗಳನ್ನು ರಚಿಸಿದವರೂ ಈ ಸಮಾಜದವರೇ ಅಲ್ಲವೆ ? ಈಗ ನಡೆಯುತ್ತಿರುವದೇನು ನನ್ನ ಕುಲಮೇಲು, ನಿನ್ನ ಕುಲಮೇಲು ನಾನು ಆ ಪಂಥಿಯವನು ನೀನು ಬೇರೆ ಪಂಥಿಯವನು ಎಂದು ದಿನಾಲು ಸಾವಿರಾರು ಜನರು ಸಾಯುವುದಿಲ್ಲವೆ.? ಇಂಥಹ ಹೀನವಾದ ವಿಚಾರವನ್ನು ಮನದಿಂದ ಕೊಡೆದುಹಾಕಿ ಎಲ್ಲರೂ ಒಂದೇ ಜಾತಿಯವರು ಎಲ್ಲರ ಪಥಒಂದೇ ಎಂದು ಭಾವಿಸಿದರೆ ಮೇಲು-ಕೀಳೆಂಬ ಅಕ್ಷರ ನಮ್ಮ ದಿನಚರಿಯಲ್ಲೇ ಬರುವುದಿಲ್ಲ. ಈ ತೆರನಾದ ಮಹೋನ್ನತವಾದ ವಿಚಾರಗಳು ನಗರದ ಪ್ರತಿಯೊಬ್ಬ ಮತದಾರನ ಮನದಲ್ಲಿ ಹೊಕ್ಕು ನಾಟ್ಯವನ್ನು ಆಡುತ್ತಿತ್ತು.

ನಗರದಲ್ಲಿ ಸರಕಾರದವರು ನ್ಯಾಯಬೆಲೆಯ ಅಂಗಡಿಯನ್ನು ಸ್ಥಾಪಿಸಲು ಸಾಕಷ್ಟು ಸಲ ಕೇಳಿಕೊಂಡರು ಅದನ್ನು ಈ ಜನರೆಲ್ಲರೂ ತಿರಸ್ಕರಿಸಿದರು. ಕರೀಮುಖಾನರ ಅಂಗಡಿಗೆ ವ್ಯಾಪಾರವಾಗುವದಿಲ್ಲವೆಂದು ಅವರಿಗೆ ಗೊತ್ತು. ಅದರ ಜೊತೆಗೆ ಕುಮಾರಗೌಡರ ಹೋಲ್‌ಸೇಲ್ ವ್ಯಾಪಾರಕ್ಕೆ ದಕ್ಕೆಬರುತ್ತದೆ ಎಂದು ಅದನ್ನು ತಿರಸ್ಕರಿಸುತ್ತಲಿದ್ದಾರೆ, ಇದಲ್ಲದೆ ಬಡವರ ಬಂಧುವಾದ ಸಂಗಪ್ಪಮಾಸ್ತರರ ಮರಣಕ್ಕೆ ಯಾರ ಕೈವಾಡವಿದೆಯೆಂದು ನನಗೆ ಆಗಲೇ ತಿಳಿದಿದೆ. ಸರಕಾರವೂ ಪತ್ತೆಹಚ್ಚಲಿ. ನನ್ನ ಅನುಮಾನ ನಿಜವಾ-

ದದ್ದೆ ಆದರೆ ನಗರದಲ್ಲಿ ರಕ್ತದ ಹೊಳೆಯು ಹರಿಯುವದಂತು ಖಂಡಿತ. ನಾವು ನ್ಯಾಯಕ್ಕಾಗಿ ಹೋರಾಡುವವರು. ಬಡವರ ಏಳಿಗೆ-ಯನ್ನು ಬಯಸುವವರು ಎಂದು ಹೇಳಿದ ರ್‍ಹಾಮನ ಮಾತುಗಳಂತೂ ನಗರದ ಮತದಾರನ ಮನದಲ್ಲಿ ಅಚ್ಚಳಿಯದೇ ಉಳಿದಿದ್ದವು. ಅದರಂತೆ ಗೋಪಾಲನ ಮನದಲ್ಲಿ ಈ ಯುವಶಕ್ತಿಯ ಬಲವು ಎಷ್ಟಿದೆ ಎಂದು ಗೊತ್ತಾಗಿತ್ತು. ಈ ಯುವಕರ ನುಡಿಗಳನ್ನು ಕೇಳಿದ ಗೋಪಾಲ ಬೆಕ್ಕಸಬೆರಗಾದನು. ಈ ಶಕ್ತಿಯನ್ನು ಈ ಮಟ್ಟಕ್ಕೆ ತರಲು ಮಾಸ್ತರರು ಪಟ್ಟಶ್ರಮವನ್ನು ನೆನೆಯಿಸಿಕೊಂಡನು. ಇಂತಹ ಉನ್ನತ ವಿಚಾರಧಾರೆಯನ್ನು ಜಗಕೆಲ್ಲ ನೀಡಿದ ಆ ಮಹಾನುಭಾ-ವನಿಗೆ ಎಂಥಹ ಕ್ರೂರವಾದ ಮರಣವನ್ನು ತಂದರು ಪಾಪಿಗಳು ಎಂದು ಮನದಲ್ಲೇ ಕೊರಗಿದನು.

## ೨೧

ಕಮಲಳಿಗೆ ಇಷ್ಟೊಂದು ಧೈರ್ಯಬರಲು ಈ ಗುಂಪೇ ಕಾರಣ-ವೆಂದು ವಿಚಾರಮಾಡಿದನು. ಮಧುಕರನಿಗಾಗಲಿ ಆತನ ಗುಂಪಿಗಾಗಲಿ ಯಾರಾದರೂ ಏನಾದರೂ ಅಂದರೆ, ಅವಳಲ್ಲಿ ಆಗುವ ಬದಲಾವಣೆ ಯನ್ನು ಸಾಕಷ್ಟು ಸಲ ಕಂಡಿದ್ದ, ಅವಳದೂ ತಪ್ಪಲ್ಲ, ಮನೆಯಲ್ಲಿ ಅವಳಿಗೆ ಸಿಗುವ ಬೆಲೆ ಅಥವಾ ತಂದೆ ಅಣ್ಣಾರಿಂದ ಅವಳಿಗಾಗುವ ಕಿರುಕುಳ ಈ ಗುಂಪನ್ನು ಸೇರಲು ಮತ್ತಷ್ಟು ಪ್ರೋತ್ಸಾಹ ನೀಡಿರ-ಬಹುದು. ಅವಳ ವರ್ತನೆಯನ್ನು ಅವಲೋಕಿಸಿದರೆ ಮಧುಕರನನ್ನು ಪ್ರೀತಿಸುವ ಹಾಗೆ ಕಾಣುವುದು. ಆದರೆ ಮಧುಕರನ ಸೋದರಮಾವನ ಮಗಳು ಪಂಜಾಳಾ ಒಬ್ಬ ಪುಣ್ಯಶಾಲಿ. ಆ ಪುಣ್ಯ ಯಾರಿಗೂ ಸಿಗದು ಎಂದು ಅನೇಕ ಸಲ ನುಡಿಯುತ್ತಿರುತ್ತಾಳೆ. ಅವಳು ಪ್ರೀತಿಸಿದ್ದು ಮಧುಕರನನ್ನೋ ಅಥವಾ ಆತನ ಪಕ್ಷವನ್ನೋ ಎಂದು ಗೋಪಾಲನಿಗೆ ತಿಳಿಯದಾಯ್ತು.

ಅಂದು ಕಮಲಳನ್ನು ನೋಡಲು ಬಂದ ವರನು ಸಾಕಷ್ಟು ಓದಿದ್ದನು. ಸುಂದರನಾಗಿದ್ದ, ಅಲ್ಲದೆ ಬ್ಯಾಂಕೊಂದರಲ್ಲಿ ಮ್ಯಾನೇಜರ್ ಕೆಲಸದಲ್ಲಿದ್ದನು. ಅಲ್ಲದೆ ಜಮೀನೂ ಸಹ ಸಾಕಷ್ಟಿತ್ತು. ಅಂಥಹ ವರನನ್ನು ತಿರಸ್ಕರಿಸಿದಳು. ಅದೇ ತರಹ ನಾಲ್ಕಾರು ವರಗಳನ್ನು ತಿರಸ್ಕರಿಸಿದ್ದಳು. ಈ ವಿಚಾರವಾಗಿ ದೀಪಕ ಗಲಾಟೆಮಾಡಿದಾಗ, ನನಗೂ ಕೂಡಾ ನನ್ನದೇ ಆದ ಆಶೆ-ಆಕಾಂಕ್ಷೆಗಳು ಇವೆ. ನನ್ನ ಮನಸ್ಸಿಗೆ ಬಂದವರ ಸಂಗಡ ನಾನು ಮದುವೆಯಾಗತೀನಿ. ನೀವಿಬ್ಬರೂ ದೊಡ್ಡವರು ಮೊದಲು ನಿಮ್ಮದಾದರೆ ತಪ್ಪೇನಿಲ್ಲ. ಗೋಪಾಲಣ್ಣನಿಗಿಂತ ನೀನೇ ಮೊದಲು ಮದುವೆಮಾಡಿಕೋ ಅಂದರೆ ನಗರದ ಹುಡುಗಿಯರು ಸುಖದಿಂದಲಾದರೂ ಜೀವಿಸ್ತಾರೆ ಎಂದು ಕಮಲಾ ರೇಗಿಸಿದ್ದಳು. ಅಂಥಹ ಹೀನಕೃತ್ಯ ನನ್ನಿಂದೇನಾಗಿಲ್ಲ ನಮ್ಮ ಮನೆತನಕ್ಕೆ ಏನಾದರೂ ಅಪಚಾರ ಆಗ ಬೇಕಾದರೆ ಅದು ನಿನ್ನಿಂದ ಆ ತಿರಬೋಕಿ ಮಧುಕರನ ಸಹವಾಸ ಮಾಡಿ ದಿಂಟಾ ನೋಡು ಅದಕ್ಕೇ ಹೇಳಿದ್ದು ಎಂದು ದೀಪಕ ಕೋಪದಿಂದ ನುಡಿ-ದಾಗ, ನೋಡು ಸ್ವಲ್ಪ ನಾಲಿಗೆ ಬಿಗಿಹಿಡಿದು ಮಾತಾಡು, ಇದೇ ಮಾತನ್ನ ಬೇರೆಯಾರಾದ್ರು ಅಂದಿದ್ರೆ ಆ ಮಾತೆ ಬೇರೆಯಾಗತ್ತಿತ್ತು ಮನೆತನದ ಗೌರವದ ಬಗ್ಗೆ ಮಾತಾನಾಡುವ ನೀನು ಎಷ್ಟು ಹುಡುಗಿಯರಿಂದ ಉಗುಳಿಸಿಕೊಂಡಿಲ್ಲ. ಮಿಲ್ಲಿನ ಕೂಲಿಕಾರ ಹೆಂಗಸರಿಂದ ಮೊನ್ನೆತಾನೇ ಚಪ್ಪಲಿಯೇಟು ತಿಂದಿಯಲ್ಲ. ಯಾವತ್ತೂ ಸರಾಯಿ ಕುಡಿದು ಹೊಲಸು ನಾರತೀಯಾ ನಿನ್ನ ಮನೆತನಕ್ಕೆ ಗೌರವ ಹೋಗಲ್ಲವೇನೊ. ನಗರದ ಜನಾನೇ ಮಧುಕರನನ್ನ ಹೊಗಳ್ತಾರೆ. ನನ್ನೆದುರು ಮಾತಾಡಿದ ಹಾಗೆ ಬೇರೆ ಯಾರಹತ್ತಿರ ಮಾತಾಡಿ ನೋಡು ನಿನ್ನನ್ನ ಹರಿದರಿದು ತಿಂದು ಬಿಡತಾರ ಎಂದು ಕೋಪ-ದಿಂದ ನುಡಿದಳು. ಗೋಪಾಲನಿಗೆ ಮಧುಕರನ ಮೇಲೆ ತುಂಬಾ ಅಭಿಮಾನವಿತ್ತು. ಕಮಲಳಷ್ಟೇ ಅಲ್ಲ ಈಡೀ ನಗರವೇ ಆತನು ಮೇಲೆ ಬೇರ ಅಭಿಪ್ರಾಯವನ್ನು ಕೊಡಲು ಒಪ್ಪದು. ಆತನು ಕಾಲೇಜಿನಲ್ಲಿಯೇ ಪ್ರಥಮ. ಅವನು ಮನಸ್ಸು ಮಾಡಿದರ ಸಾಕಷ್ಟು ದುಸ್ಕಾರ್ಯಗಳನ್ನು ಮಾಡಬಹುದಿತ್ತು. ಅಂಥಹ ಹೊಲಸುತನದಿಂದ

ಆತದೂರವಿದ್ದು ಉತ್ತಮಗುಣವನ್ನು ಹೊಂದಿದ್ದರಿಂದಲೇ ಇಂದು ಜನಪ್ರಿಯನಾಗಿದ್ದಾನೆ.

೨೨

ನಗರದ ಜನರು ತಮ್ಮ ಅತ್ಯಮೂಲ್ಯವಾದ ಮತವನ್ನು ಹಾಕಿ, ಜನಸೇವೆಯೇ ಜನಾರ್ಧನನ ಸೇವೆಯೆಂದು ನಂಬಿದ್ದ, ಜನಸಾಮಾನ್ಯರ ಹಿತದ ಸಲುವಾಗಿ ದುಡಿಯುವ ಈ ಯುವಶಕ್ತಿ ಮಧುಕರನ ಗುಂಪನ್ನು ತಮ್ಮ ಸೇವೆಗಾಗಿ ಆರಿಸಿಕೊಂಡಿತ್ತು. ಜನರ ಮನವನ್ನು ಗೆದ್ದು ಜಯವನ್ನು ಹೊಂದಿ ಫಲಿತಾಂಶವು ಹೊರಬಿದ್ದಾಗ ಅಲ್ಲಿಯ ಕಾರ್ಯಕರ್ತರನ್ನೂ, ನಗರದ ಜನರನ್ನು ಮತನೀಡಿದುದಕ್ಕಾಗಿ ಅಭಿನಂದನೆಯ ಕರಪತ್ರಗಳನ್ನು ಹೊರಡಿಸಿದರು. ನಿಮ್ಮ ಪವಿತ್ರವಾದ ಮತವನ್ನು ನಮಗೆ ನೀಡಿದ್ದಕ್ಕಾಗಿ ನಿಮಗೆಲ್ಲರಿಗೂ ಹೃದಯಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುವೆವು. ನಮ್ಮ ಮೇಲೆ ನೀವು ವಿಶ್ವಾಸವನ್ನು ಇಟ್ಟು ಆರಿಸಿತಂದಿದ್ದೀರಿ. ನಿಮ್ಮ ವಿಶ್ವಾಸವನ್ನು ನಾವು ಉಳಿಸಿಕೊಂಡು ಹೋಗುತ್ತೇವೆಂದು ಬರವಸೆಕೊಡುವೆವು. ನಿಮ್ಮ ಈ ಮತವು ಯುವಶಕ್ತಿಯನ್ನು ಪ್ರೋತ್ಸಹಿಸುವ ಮತ, ಬಂಡವಾಳಶಾಹಿಗಳ ವಿರುದ್ಧದ ಮತ, "ನವಸಮಾಜ ಉದಯವಾಗಲು ಸಹಕರಿಸಿದ ಮತ," ಬಡವರನ್ನು ಉದ್ಧರಿಸುವ ಮತವೆಂದು ನಾವು ಬಾವಿಸುವೆವು. ನಿಮ್ಮೆಲ್ಲರ ಸೇವೆಯನ್ನು ಮಾಡಲು ಅವಕಾಶವನ್ನು ಮಾಡಿಕೊಟ್ಟದ್ದಕ್ಕಾಗಿ ತಮ್ಮನ್ನು ಅಭಿನಂದಿಸುವೆವು. ಎಂದು ಮುದ್ರಿಸಿ ನಗರದ ಜನರಿಗೆಲ್ಲ ಹಂಚಿದರು.

ನಗರದ ಈ ಚುನಾವಣೆಯ ನಿಮಿತ್ತ ಗೋಪಾಲ ಸಾಕಷ್ಟು ವ್ಯವಸ್ಥೆ ಮಾಡಿದ್ದನು. ನಾಗನಗೌಡರ ಗುಂಪಿನಿಂದ ಒಂದೆರಡು ಚಿಕ್ಕ ಪುಟ್ಟ ಘಟನೆಗಳು ಜರುಗಿದವು. ಅದನ್ನು ಮಧುಕರನ ಗುಂಪು ಸುಧಾರಿಸಿಕೊಂಡು ಹೋಯಿತು. ಉಗ್ರಗಾಮಿಯಾದ ರಾಮುನನ್ನು

ಮಧುಕರ ಯಾವತ್ತೂ ಜೊತೆಯಲ್ಲಿಯೇ ಕರೆದುಕೊಂಡು ತಿರುಗುತ್ತಿ-ದ್ದುದರಿಂದ ಗೋಪಾಲನಿಗೆ ಬಹಳ ಸಹಾಯವಾಗಿತ್ತು. ನಗರದ ತುಂಬೆಲ್ಲ ಬಿಗುವಿನ ವಾತಾವರಣವಿದ್ದುದರಿಂದ ಯಾವದೇ ತರಹದ ದುರ್ಘಟನೆಗಳು ನಡೆಯಲಿಲ್ಲ. ನಗರದಲ್ಲಿ ಒಂದು ವಾರದವರೆಗೆ ನಿಷೇಧಾಜ್ಞೆಯನ್ನು ತಂದಿದ್ದನು. ಒಂದು ವಾರದವರೆಗೆ ಹಗಲುರಾತ್ರಿ ಯನ್ನದೇ ಕೆಲಸಗಳನ್ನು ಗೋಪಾಲ ಮಾಡುತ್ತಿದ್ದನು. ಒಂದು ವಾರದವರೆಗೆ ಊಟನಿದ್ರೆಯನ್ನು ಕಳೆದುಕೊಂಡು ದುಡಿದಿದ್ದರ ಫಲ-ದಿಂದ ಎಲ್ಲ ಕೆಲಸಗಳು ಸುಗಮವಾಗಿ ಸಾಗಿ ಮುಗಿದು ಹೋದವು. ನಗರಸಭೆಯ ಅಧಿಕಾರವನ್ನು ವಹಿಸಿಕೊಂಡು, ಆನಂದ ಅಧ್ಯಕ್ಷನಾ-ಗಿಯೂ, ಸ್ವಾಮಿ ಉಪಾಧ್ಯಕ್ಷನಾಗಿಯೂ, ನಗರಾಭಿವೃದ್ಧಿಯ ಕೆಲಸ ವನ್ನು ರಾಜೇಶ ವಹಿಸಿಕೊಂಡಿದ್ದನು. ನಮಗೆ ದೊರೆತ ಈ ಜಯವು ನಮ್ಮದಾಗಿರದೆ, ನಗರದ ಪ್ರತಿಯೊಬ್ಬ ಪ್ರಜೆಯ ಜಯವಾಗಿದೆ. ಯಾವದನ್ನೂ ಅರಿಯದೇ ಇದ್ದ ಮುಗ್ಧ ಮಾನವನನ್ನು ಕ್ರೂರ ಯಾತನೆಯ ವಿಭಜನೆಗೆ ಗುರಿ ಮಾಡಿದ ಈ ಸಮಾಜವನ್ನು ನಿರ್ಮೂಲನ ಮಾಡಿ ನವಸಮಾಜವನ್ನು ಮಾನವತಾವಾದದ ಆಧಾರದ ಮೇಲೆ ನಿರ್ಮಿಸಲು ಹೊರಟ ಸಮಾಜವಾದಿಗಳ ಜಯವೆಂದು ಭಾವಿಸುವೆನು. ನಮ್ಮ ಚುನಾವಣೆಯ ಪ್ರಣಾಳಿಕೆಯ ಪ್ರಕಾರ ಎಲ್ಲಾ ಕಾರ್ಯಕ್ರಮಗಳನ್ನು ಮಾಡಿತೋರಿ ಸಲು ತಾವೆಲ್ಲ ಸಹಕಾರ ನೀಡಬೇಕು. ಮಾನವನ ಮೂಲಭೂತ ಹಕ್ಕುಗಳಿಗಾಗಿ ಸಾರ್ವಜನಿಕರ ಹಿತಕ್ಕಾಗಿ ಎಂಥಹ ತ್ಯಾಗಕ್ಕೂ ನಾವು ಸಿದ್ಧರಿದ್ದೇವೆ. ನಾವು ಯಾವುದೇ ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಅದನ್ನು ಅಂತಿಮವಾಗಿ ನಿಮಗೆ ಬಿಡುತ್ತೇವೆ. ನಿಮ್ಮ ಸಲಹೆಯ ಮೇರೆಗೆ ನಾವು ಮುಂದುವರೆಯುವೆವು. ಪ್ರಜೆಗಳ ತೀರ್ಮಾನವೇ ಅಂತಿಮ ತೀರ್ಮಾನ. ನಗರದ ಸಾಕಷ್ಟು ಜನರಿಗೆ ಅಕ್ಷರ ಜ್ಞಾನವಿಲ್ಲ. ಅದನ್ನು ಒದಗಿಸುವುದು ನಮ್ಮ ಮುಖ್ಯ ಕರ್ತವ್ಯವೆಂದು ಭಾವಿಸಿ ಒಂದುವಾರದಲ್ಲಿಯೇ ಈ ಕೆಲಸವನ್ನು ಮಾಡು ವೆವು. ಎಂದು ಆನಂದ ನುಡಿದರೆ, ಪ್ರಜಾಪ್ರಭುತ್ವದ ನಿಜವಾದ

ಅರ್ಥವನ್ನು ಜನರಿಗೆ ತಿಳಿಯಪಡಿಸಿ, ಜನರಿಂದ, ಜನರ ಸಲುವಾಗಿ, ಜನರೇ ಆಳುವ ಈ ಪ್ರಭುತ್ವದಲ್ಲಿ ಪ್ರಜೆಯ ಮುಖ್ಯ ಕರ್ತವ್ಯ ವೇನೆಂಬುದನ್ನು ತಿಳಿಯಪಡಿಸಬೇಕಾಗಿದೆ. ಬರೀಹಕ್ಕುಗಳಿಗಾಗಿ ಪರದಾಡದೆ ಕರ್ತವ್ಯಗಳನ್ನು ಸಹ ಅರಿತು ಮುಂದುವರಿಯಬೇಕು. ಯಾವದೇ ಕಾರ್ಯಗಳನ್ನು ನಾವು ಬರೀ ಮಾಡಿತೋರಿಸುವೆವು. ಸಾಧ್ಯವಾಗದಿದ್ದರೆ ಹೋರಾಟಮಾಡುವೆವು, ಫಲಿಸದೇ ಹೋದಲ್ಲಿ ಕ್ರಾಂತಿ. ಕ್ರಾಂತಿ ಹೋರಾಟದಿಂದ ಎಲ್ಲವನ್ನು ಸಾಧಿಸಬಹುದು. ಅದಕ್ಕೆ ನಿಮ್ಮೆಲ್ಲರ ಸಹಕಾರ ನಮಗೆಬೇಕು ಎಂದು ಸ್ವಾಮಿ ನುಡಿದನು. ಅಂದಿನ ಸಮಾರಂಭದಲ್ಲಿ ನಗರಸಭೆಯ ಮುಖ್ಯ ಅಧಿಕಾರಿ, ನಿಮ್ಮ ಈ ಮಹತ್ತರವಾದ ಕಾರ್ಯಕ್ರಮಗಳು ಆದಷ್ಟು ಬೇಗನೆ ಜಾರಿಗೆ ಬರಲಿ ಎಂದು ಶುಭಕೋರಿದರು.

೨೩

ನಗರಸಭೆಯಲ್ಲಿ ಹೊಸದಾದ ಆಡಳಿತಪಕ್ಷ ತನ್ನ ಅಧಿಕಾರವನ್ನು ವಹಿಸಿಕೊಂಡು ಒಂದು ವಾರದಲ್ಲಿ ಅಕ್ಷರಜ್ಞಾನವನ್ನು ಎಲ್ಲರಿಗೂ ಕೊಡುತ್ತಿರುವದು ತುಂಬಾ ಸಂತೋಷ. ಅದರಂತೆ ನಗರದಲ್ಲಿ ನ್ಯಾಯಬೆಲೆಯ ಅಂಗಡಿಯನ್ನು ಕೂಡಲೇ ಪ್ರಾರಂಭಿಸುವ ವ್ಯವಸ್ಥೆಯನ್ನು ಮಾಡಬೇಕು, ಅದಲ್ಲದೆ ಪಡಿತರ ಯೋಜನೆಯಿಂದ ಪ್ರಜೆಗಳಿಗೆ ಆಹಾರ ಸಾಮಗ್ರಿಗಳನ್ನು ಒದಗಿಸುವ ವ್ಯವಸ್ಥೆಯನ್ನು ಮಾಡಬೇಕು ಹಾಗೂ ಕೂಲಿಕಾರರಿಗೆ ಕನಿಷ್ಟವೇತನವನ್ನು ಹೆಚ್ಚಿಸಬೇಕೆಂದು ಬರಿದಿದ್ದಿತು. ಅದಲ್ಲದೆ ನಗರದಲ್ಲಿ ಬಾಲಕಾರ್ಮಿಕರು ಸಾಕಷ್ಟು ಜನರಿರುವದರಿಂದ ಅವರಿಗೆ ನ್ಯಾಯವನ್ನು ದೊರಕಿಸಿ ತೊಂದರೆಗಳನ್ನು ಪರೀಶಿಲಿಸಬೇಕೆಂದೂ ಸಹ ಬರೆದಿದ್ದಿತು. ಇದಲ್ಲದೆ ಪ್ರತಿಯೊಂದು ಕೇರಿಗೂ ದೇಶದ ಸಲುವಾಗಿ ತ್ಯಾಗಮಾಡಿದವರ ಇಲ್ಲವೆ ಸಮಾಜ ಸುಧಾರಕರ ಹೆಸರನ್ನು ಇಟ್ಟು ಪತ್ರವ್ಯವಹಾರಗಳು ಸುಗಮವಾಗಿ ಸಾಗುವಂತೆ ವ್ಯವಸ್ಥೆಯನ್ನು ಮಾಡಬೇಕೆಂದು ಬರೆದಿದ್ದಿತು. ಇದನ್ನು ಓದುತ್ತ ಕುಳಿತ ಗೋಪಾಲ ಮಧುಕರನ ಬುದ್ಧಿವಂತಿಕೆಯನ್ನು

ಕೊಂಡಾಡಿದ. ನಗರದಲ್ಲಿ ಆಳುತ್ತಿರುವ ಪಕ್ಷವು ಹೊಂಬೆಳಕಿನ ಸಂಪಾದಕದ ವ್ಯವಸ್ಥೆಯ ಪಕ್ಷವೂ ಒಂದೇ, ಆದರೆ ಎರಡು ಒಂದೇ ಎಂದು ತೋರಿಸಿಕೊಡುವಂತಿಲ್ಲ. ಒಂದು ಪತ್ರಿಕೆ ಯಾವುದೇ ರಾಜಕೀಯ ಪಕ್ಷಕ್ಕೆ ಹೊಂದಾಣಿಕೆಯನ್ನು ಹೊಂದಿರಬಾರದೆಂಬುದೇ ಈತನ ಉದ್ದೇಶ. ಯಾವುದೇ ಸಾರ್ವಜನಿಕರ ಸಮಸ್ಯೆಯನ್ನು ಈ ಪತ್ರಿಕೆಯ ಮುಖಾಂತರ ಮಧುಕರ ನಗರದ ಆಡಳಿತ ವರ್ಗಕ್ಕೆ ತಿಳಿಸುತ್ತಿದ್ದನು. ಇದರಿಂದ ಪತ್ರಿಕೆಯ ಹೆಸರು ಮತ್ತಷ್ಟು ಹೆಚ್ಚಿತು. ಮಧುಕರನ ಹರಿತವಾದ ಲೇಖನಗಳು ನಗರದ ಜನರನ್ನು ಹಾಗೂ ಸುತ್ತಮುತ್ತಲಿನ ಜನರ ಮನಸ್ಸನ್ನು ಸೂರೆಗೊಂಡಿತು.

ಈ ಉನ್ನತಮಟ್ಟದ ಆಶಾಗೋಪುರಗಳನ್ನು ನಿರ್ಮಿಸಲು ಕಂಕಣ ಬದ್ಧರಾಗಿ ಹಗಲಿರುಳು ದುಡಿಯುವ ಈ ಯುವಸಕ್ತಿಯ ಆಶೆ ಈಡೇರುವದೇ? ನಮ್ಮ ದೇಶದಲ್ಲಿ ಬಲಿಷ್ಟವಾದ ಶ್ರೀಮಂತವರ್ಗ, ಬಂಡವಾಳ ಶಾಹಿವರ್ಗ ಇವರನ್ನು ಮುಂದೆ ಬಿಡುವದೇ ? ತಮ್ಮ ನಲವತ್ತು ವರ್ಷದ ರಾಜಕೀಯ ಅನುಭವವನ್ನು ಪ್ರದರ್ಶಿಸದೇ ಬಿಡುವರೇ? ನಗರದ ಮೋದಾವಿಯೆಂದೇ ಹೆಸರನ್ನು ಗಳಿಸಿದ್ದ ಸಂಗಪ್ಪಮಾಸ್ತರರನ್ನು ಬಲಿತೆಗೆದು ಕೊಂಡ ಈ ನೀಚರು ಈ ಹುಡುಗರನ್ನು ಸುಮ್ಮನೇ ಬಿಡುವರೇ? ಅಥವಾ ಈ ಯುವಶಕ್ತಿಯ ಮುಂದೆ ಎಲ್ಲವೂ ನಾಶವಾಗಿ, ಸತ್ಯದ ಸಮತಾವಾದದ ಬದುಕನ್ನು ಜನರೆಲ್ಲ ಕಾಣುವರೇ? ಎಂದು ಅನೇಕ ಬುದ್ಧಿಜೀವಿಗಳು, ರಾಜಕೀಯ ಮೇದಾವಿಗಳು ವಿಚಾರ ಮಾಡುತ್ತಿದ್ದರು. ಅದರಂತೆ ಗೋಪಾಲ ಸಹ ವಿಚಾರವನ್ನು ಮಾಡಿದ್ದು ಉಂಟು.

ಸಾರ್ವಜನಿಕರ ಮನದಲ್ಲಿ ಆನಂದನ ಹೆಸರು ಪ್ರಚಾರವಾಗುತ್ತಲೇ ಸಾಗಿದೆ. ನಗರಾಭಿವೃದ್ಧಿಯ ಸಾಕಷ್ಟು ಕೆಲಸಗಳು ನಡೆದಿವೆ. ಕೆಲವೊಂದನ್ನು ಮಾಡಿ ತೋರಿಸಿದ್ದಾರೆ. ಪ್ರತಿಯೊಂದು ಸರ್ಕಲ್ಲಿನಲ್ಲಿ ದೇಶಕ್ಕಾಗಿ ನಿಸ್ವಾರ್ಥಭಾವನೆಯಿಂದ ದುಡಿದು ತಮ್ಮ ದೇಹವನ್ನು ಸಾರ್ವಜನಿಕರ ಹಿತಕಕ್ಕಾಗಿ ತ್ಯಾಗಮಾಡಿದ ದೇಶಭಕ್ತರ ಪ್ರತಿಭೆಯನ್ನು ಇಟ್ಟಿದ್ದರು. ದೇಶದ ಸ್ವತಂತ್ರ್ಯವನ್ನು ದೊರಕಿಸಿಕೊಳ್ಳಲು ಹೋರಾಡಿದ

ಚಂದ್ರಶೇಕರ ಅಜಾದ್, ಸುಭಾಶಚಂದ್ರ ಬೋಸ್, ಭಗತ್‌ಸಿಂಗ್, ಸಿಂಧೂರಲಕ್ಷ್ಮಣ, ಅಲ್ಲದೆ ಹನ್ನೊಂದನೆಯ ಶತಮಾನದಲ್ಲಿ ಜಗತ್ತಿನ ಜ್ಯೋತಿಯಾಗಿ ಹೆಸರನ್ನು ಗಳಿಸಿ ಬಡವ ಬಲ್ಲಿದರೆಂಬ ಬೇದವನ್ನು ಹೊಡೆದುಹಾಕಿ, ಕುಲಕುಲವೆಂದು ಪರದಾಡುವ ಜನರಮಧ್ಯ ಒಳ್ಳೆಯ ರಕ್ತಸಂಬಂಧವನ್ನು ಬೆಳಸಿ ಎಲ್ಲರೂ ಸರಿಸಮಾನರು ಕಾಯಕವೇ ಕೈಲಾಸವೆಂದು ಸಾರಿ, ದುಡಿಮೆಯೇ ದೇವರು ಎಂದು ಸಾರುತ್ತ ಜನರ ಪ್ರೀತಿಗೆ ಪಾತ್ರರಾದ ಬಸವಣ್ಣನವರ ಹೆಸರನ್ನು ಇಟ್ಟು ಜನರ ಪತ್ರವ್ಯವಹಾರಗಳು ಸುಗಮವಾಗಿ ಸಾಗಲು ಅನುಕೂಲ ಮಾಡಿದ್ದರು. ಸಾರ್ವಜನಿಕರ ಸಲುವಾಗಿ ಅವಶ್ಯಕವಿರುವ ಮಲಮೂತ್ರ ವಿಸರ್ಜನೆ ಸಲುವಾಗಿ ಒಳಚರಂಡಿ ಯೋಜನೆಯನ್ನು ಮಾಡಲಾಗಿತ್ತು.

ಸಾರ್ವಜನಿಕರ ಸ್ಥಳದಲ್ಲಿ ಅನೇಕರು ಮನೆಗಳನ್ನು ಕಟ್ಟಿಸಿ ಕೊಂಡಿದ್ದರು. ಅವರೆಲ್ಲರನ್ನು ಬಿಡಿಸಿ ಹೊಸದಾಗಿ ಸ್ಥಳದ ವ್ಯವಸ್ಥೆ ಯನ್ನು ಮಾಡಿತಲ್ಲದೆ ಮನೆಗಳನ್ನು ಸಹ ನಿರ್ಮಿಸಿಕೊಟ್ಟರು. ಕೆಲವೊಂದು ಪ್ರಮುಖರು ಅತಿಕ್ರಮವಾಗಿ ಸರಕಾರಿ ಸ್ಥಳವನ್ನು ಆಕ್ರಮಿಸಿಕೊಂಡಿದ್ದರು, ಅದನ್ನು ಬಿಡಲು ಹೇಳಿದಾಗ ಅವರು ಬಿಡ-ದಿದ್ದಲ್ಲಿ, ಸರಕಾರದಿಂದ ನೋಟೀಸನ್ನು ತಂದು ಪೋಲಿಸರ ಸಹಾಯದಿಂದ ಅದನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಈ ಸಂಘರ್ಭದಲ್ಲಿ ಪಕ್ಕ ದೂರಿನ ಶ್ರೀಮಂತನೊಬ್ಬ ಹಾಗೂ ಕರೀಮುಖಾನ ಸೇರಿ ಒಂದು ಸಿನಿಮಾ ಮಂದಿರವನ್ನು ನಿರ್ಮಿಸಿದ್ದರಲ್ಲದೆ, ಅದರ ಯಾವ ಕಂದಾಯವೂ ಸರಕಾರಕ್ಕೆ ಸಂದಿರಲಿಲ್ಲ. ಹೀಗಾಗಿ ಅವರಿಬ್ಬರೂ ತಿಂಗಳಿಗೆ ಲಕ್ಷಾಂತರ ರೂಪಾಯಿ ಬರುವ ಆದಾಯ ಹೋಯಿತಲ್ಲವೆಂದು ಸಂಕಟಪಟ್ಟರು.

ನಗರದಲ್ಲಿ ಯಾರಾದರೂ ತಮ್ಮ ನಿವಾಸಗಳನ್ನು ಕಟ್ಟಿಸುವ ಸಲುವಾಗಿ ಸಾರ್ವಜನಿಕರ ಸ್ಥಳದಲ್ಲಿ ಕಲ್ಲುಮಣ್ಣುಗಳನ್ನು ಹಾಕಿ ದ್ದರೆ, ಅವರು ಒಂದು ವಾರದಲ್ಲಿ ಅದನ್ನು ಮುಗಿಸಿಬಿಡಬೇಕು. ರಸ್ತೆಗಳಲ್ಲಿ ಕಲ್ಲು ಮಣ್ಣನ್ನು ಹಾಕಬೇಕಾದರೆ ನಗರಸಭೆಯಿಂದ ಪರವಾನಿಗಿ ಪತ್ರವನ್ನು ಪಡೆದಿರಬೇಕು. ಹೀಗಾಗಿ ನಗರದ ಸ್ವಚ್ಛ-

ತೆಯನ್ನು ಕಾಪಾಡಲು ನಗರಸಭೆಯು ಶಕ್ತಿಮೀರಿ ಪ್ರಯತ್ನಿಸುತ್ತಿತ್ತು. ಪ್ರತಿಯೊಬ್ಬರು ಎಂಟು ತಾಸುಗಳವರೆಗೆ ಮಾತ್ರ ಕೆಲಸವನ್ನು ಮಾಡುವಂತೆ ನಗರಸಭೆಯು ಕೆಲಸಗಾರರಿಗೆ ಆದೇಶ ನೀಡಿದರು. ಮೊದಲು ಹನ್ನೆರಡು ಗಂಟೆಗಳವರೆಗೆ ದುಡಿಯುತ್ತಿದ್ದರು. ಹೀಗಾಗಿ ನಗರಸಭೆಗೆ ಮತ್ತೆ ಕೆಲಸಗಾರರನ್ನು ನೇಮಿಸಿಕೊಂಡರು. ನಗರಸಭೆಯು ಕೆಲಸಗಾರರು ನಿಷ್ಠೆ ಶ್ರದ್ಧೆಯಿಂದ ದುಡಿಯುವ ಉದ್ದೇಶದಿಂದ ಅವರಿಗೆ ಉಡಿಗೆಗಳನ್ನು ಹಾಗೂ ದಿನಕ್ಕೊಂದು ಸಲ ತಿಂಡಿಯನ್ನು ಕೊಡುತ್ತಿದ್ದರು. ಹೀಗೆ ನಗರದಲ್ಲಿ ತನ್ನ ಗುರಿಯನ್ನು ಮೀರಿ ಅನೇಕ ಸಾಧನೆಗಳನ್ನು ಮಾಡಿತೋರಿಸಿ ಜನಪ್ರಿಯರಾದರು.

೨೪

ಮಧುಕರ ಮಾತ್ರ ತನ್ನ ಹರಿತವಾದ, ನಿಷ್ಪಕ್ಷಪಾತವಾದ ಬರವಣಿಗೆಯಿಂದ ಜನರ ಮನವನ್ನು ಸಂಪೂರ್ಣವಾಗಿ ಬದಲಾಯಿಸಿ ತನ್ನ ಕಡೆಗೆ ಒಲಿಸಿಕೊಂಡಿದ್ದನು. ಈತನ ಬುದ್ಧಿಮತ್ತೆಯನ್ನು ಎಷ್ಟು ಹೊಗಳಿದರೂ ಕಡಿಮೆಯೇ ಎಂದು ಅನೇಕ ವೇದಾವಿಗಳು ಅಭಿಪ್ರಾಯವನ್ನು ಪಟ್ಟಿದ್ದರು. ನಾಡಿನಾದ್ಯಂತ ರೈತಕೂಲಿಕಾರರಿಗೆ, ಬೀಡಿಕೆಲಸಗಾರರಿಗೆ ಕನಿಷ್ಟವೇತನವನ್ನು ಹೆಚ್ಚಿಸಲು ಹಾಗೂ ಅವರು ದಿನಕ್ಕೆ ಕೇವಲ ಎಂಟುತಾಸು ದುಡಿಯುವಂತೆ ಮಾಡಲು, ಮಧುಕರನ ನೇತೃತ್ವದಲ್ಲಿ ಒಂದು ನಿಯೋಗವು ಹೋಗಿತ್ತು. ನಂತರ ಅದನ್ನು ಸರಕಾರವು ಚರ್ಚಿಸಿ, ಒಪ್ಪಿಕೊಂಡಿತ್ತು. ಈ ವಿಷಯವನ್ನು ತಿಳಿದ ಶ್ರೀಮಂತರೈತರು ಮಧುಕರನ ಮೇಲೆ ಕೋಪಗೊಂಡರು. ಹೀಗೆಯೇ ಮುಂದುವರೆಯಲು ಬಿಟ್ಟರೆ ನಮ್ಮ ಆಸ್ತಿಗಳನ್ನೆಲ್ಲ ಹಂಚಲು ಹೇಳುವನೆಂದು ವಿಚಾರಿಸಿ ಹೇಗಾದರು ಮಾಡಿ ನಮ್ಮ ತಂಟೆಗೆ ಬರದೆ ಹಾಗೇ ಮಾಡಬೇಕೆಂದು ಲೆಕ್ಕಹಾಕಿದರು. ಅವರ ಸಂಗಡ ನಗರದ ಪ್ರಮುಖರು ಒಂದುಗೂಡಿದರು. ಮಧುಕರನ ಸೋದರಮಾವ ಹೊಲಪಲ್ಲಿಯೇ ಮನೆಯನ್ನು ಮಾಡಿಕೊಂಡು ತೋಟಗಾರಿಕೆ ಮಾಡುತ್ತಿದ್ದನು.

ದೀಪಕ ಹಾಗೂ ಕಾಮೇಶ ಅವರ ಪಕ್ಕದ ಹೊಲದವರ ಸಹವಾಸವನ್ನು ಬೆಳಸಿದರು. ಮಧುಕರನ ಮಾವನ ಹೊಲದ ಬೆಳೆಯನ್ನು ನಾಶಮಾಡಿದರು. ಈ ಹೊಲ ನಮ್ಮದು ಎಂದು ಹೇಳಿ ತಾವೇ ಕಾಲುಕೆದರಿ ಜಗಳವನ್ನು ತೆಗೆದರು. ಊರ ಪ್ರಮುಖರೆಲ್ಲರೂ ಸೇರಿ ಪಕ್ಕದ ಹೊಲದವರನ್ನು ಛೀಮಾರಿ ಹಾಕಿದರು.

ನಂತರ ದೀಪಕ ಕಾಮೇಶರು ಈ ಸೇಡನ್ನು ಹೇಗಾದರೂ ಮಾಡಿ ತೀರಿಸಿಕೊಳ್ಳಬೇಕು ಎಂದು ಅವರನ್ನು ಹುರಿದುಂಬಿಸಿ ಅವರನ್ನು ಸುಟ್ಟುಬೂದಿಮಾಡಿರೆಂದು ಹೇಳಿದರು. ನಿಮಗೇನಾದರು ತೊಂದರೆ ಬಂದರೆ ನಾವಿದ್ದೇವೆ. ನಮ್ಮ ಮಂತ್ರಿಗಳಿದ್ದಾರೆಂದು ಹೇಳಿದಾಗ, ಅವರು ಒಪ್ಪಿ ಮಧುಕರನ ಸೋದರಮಾವ, ಅವನ ಹೆಂಡತಿ, ಮಂಜುಳಾ ಹಾಗೂ ಕೂಲಿಕಾರ ಮನುಷ್ಯ ಮನೆಯಲ್ಲಿ ಮಲಗಿದಾಗ ಮನೆಗೆ ಬೆಂಕಿಹಚ್ಚಿದರು. ಮನೆಯ ಸುತ್ತಲೂ ಸುಮಾರು ಒಂದು ಫರ್ಲಾಂಗಿನ ದೂರದಲ್ಲಿ ಅಲ್ಲಲ್ಲಿ ಒಂದೊಂದು ಮನೆಗಳಿದ್ದವು. ಎಲ್ಲರೂ ಬಂದು ನೀರಿನಿಂದ ಆರಿಸುವಷ್ಟರಲ್ಲಿ ಮನೆಯು ಪೂರ್ತಿ ಉರಿಯಲ್ಲಿ ಮುಳುಗಿಹೋಯಿತು. ಅಷ್ಟರಲ್ಲಿ ಕೆಲವರು ಒಳಗೆ ನುಗ್ಗಿ ಮೂವರನ್ನು ಹೊರಗೆ ತಂದರು. ಆದರೆ ಪ್ರಯೋಜನವಾಗಲಿಲ್ಲ. ಎಲ್ಲ ಶರೀರಗಳು ಬೆಂದು ಹೋಗಿದ್ದವು. ಆದರೂ ಅವರನ್ನು ಎತ್ತಿನಗಾಡಿಯಲ್ಲಿ ನಗರದ ಆಸ್ಪತ್ರೆಗೆ ತಂದರು. ಪರೀಕ್ಷಿಸಿದ ವೈದ್ಯರು ಪ್ರಯೋಜನವಿಲ್ಲವೆಂದು ಹೇಳಿದರು. ವಿಷಯವನ್ನು ತಿಳಿದ ಮಧುಕರ ದಾವಿಸಿ ಬಂದನು. ಈ ವಿಷಯವನ್ನು ತಿಳಿದ ಮಧುಕರನ ಗೆಳೆಯರು ಎಲ್ಲರೂ ದಾವಿಸಿ ಬಂದರು. ಸಿರಫರಾದಿಗಳ ಮೇಲೆ ಸೇಡನ್ನು ತೀರಿಸಿಕೊಂಡವರ ಮೇಲೆ ಕೋಪದಿಂದ ಕೂಗಾಡಿದರು. ನಾಗನಗೌಡರು ಹಾಗೂ ಅವರ ಗುಂಪು ಬಂದು ಬಲು ಸಂತೋಷದಿಂದ ಇದ್ದುದನ್ನು ಜನರಿಗೆ ತೋರ್ಪಡಿಸದೆ, ಬೆಂದದೇಹಗಳ ಮುಂದೆ ಬಂದು ತನ್ನ ದುಃಖವನ್ನು ತೋಡಿಕೊಂಡರು, ಅಲ್ಲದೆ ದುಃಖಾಗ್ನಿಯಲ್ಲಿ ಬೆಂದುಹೋದ ಮಧುಕರನಿಗೆ ಸಮಾದಾನ ಹೇಳಿದರು. ಕೆಲವು ಸ್ವಯಂಸೇವಕರನ್ನು ಸಮಾದಾನ

ಪಡಿಸುವುದೇ ಒಂದು ದೊಡ್ಡ ಕೆಲಸವಾಯ್ತು. ಆನಂದನ ತಂದೆಗೆ, ಮಧುಕರನಿಗೆ ಎಷ್ಟು ತರಹದಿಂದ ಸಮಾಧಾನ ಹೇಳಿದರೂ ಪ್ರಯೋಜನ ವಾಗಲಿಲ್ಲ. ಕಮಲ, ವಿಮಲರು ರಾಮುವನ್ನು ಹುಡುಕಿ ನಿಷ್ಫಲ ಹೊಂದಿ, ಆನಂದನ ತಂದೆಗೆ ಮಧುಕರನನ್ನು ಸಮಾಧಾನಗೊಳಿಸಲು ಹೇಳಿದರು. ರಾಮು ನಗರಕ್ಕೆ ಶವಗಳು ಬಂದತಕ್ಷಣ, ಸ್ವಾಮಿ ಹಾಗೂ ಕಾಂತರಾಜನನ್ನು ಕರೆದುಕೊಂಡು ಹಳ್ಳಿಗೆ ಹೋದನು. ಅಲ್ಲಿ ಸೋದರಮಾವನ ಪಕ್ಕದ ಹೊಲದವರನ್ನು ಪತ್ತೆಹಚ್ಚಲು, ಅವರು ಮನೆಯಲ್ಲಿರಲಿಲ್ಲ. ಅವರು ಆಸ್ಪತ್ರೆಯಲ್ಲಿದ್ದಾರೆಂದು ತಿಳಿದು ಬಂದಾಗ, ನೇರವಾಗಿ ಅಲ್ಲಿಗೆ ಹೋದರು. ನಂತರ ಅವರ ಮುಖ-ಗಳನ್ನು ಗುರುತಿಸಿಕೊಂಡು ಅಲ್ಲಿಯ ಕೆಲಸಗಾರನಿಗೆ ಅವರ ವಿಷಯ ವನ್ನು ಸಂಗ್ರಹಿಸಲು ಹೇಳಿಬಂದರು. ಬರುವಷ್ಟರಲ್ಲಿ ಅಂತಿಮ ಸಂಸ್ಕಾರವನ್ನು ಹಳ್ಳಿಯಲ್ಲಿಯೇ ನೆರವೇರಿಸಿದ್ದರಿಂದ ಅಲ್ಲಿ ಅವರು ಪಾಲ್ಗೊಂಡರು. ನಂತರ ಎಲ್ಲ ಸ್ವಯಂಸೇವಕರು ಮಧುಕರನಿಗೆ ಧೈರ್ಯವನ್ನು ಹೇಳಿ ಹೋದರು. ಆದರೆ ಆನಂದ, ಮೂರ್ತಿ, ನಜೀರ ಬಸವರಾಜ, ರಾಜೇಶರೆಲ್ಲರೂ ಮಧುಕರನನ್ನು ಬಿಟ್ಟು ಅಗಲಲಿಲ್ಲ. ಕಮಲ, ವಿಮಲ, ವಂದನಾ ಸಹ ಇವರನ್ನು ಬಿಟ್ಟಿರಲಿಲ್ಲ.

೨೫

ಗೋಪಾಲನಿಗೆ ಇದೊಂದು ಸವಾಲಾಗಿ ಹೋಯಿತು. ಎಡ ಬಿಡದೇ ತನ್ನ ಕೆಲಸದಲ್ಲಿ ನಿರತನಾಗಿದ್ದನು. ಅವನೂ ಸಹ ಮಧುಕರನಿಗೆ ಸಮಾಧಾನವನ್ನು ಹೇಳಿ ಒಂದೆರಡುವಾರದಲ್ಲಿ ಅವನ್ನು ಪತ್ತೆಹಚ್ಚುವೆನು ಎಂದು ಹೇಳಿ ತನ್ನ ಕೆಲಸದಲ್ಲಿ ನಿರತನಾದನು.

ರಾಮು ಹಾಗೂ ಇಬ್ಬರು ಗೆಳೆಯರು ಸೇರಿಕೊಂಡು ಈ ವಿಷಯದ ಬಗ್ಗೆ ವಿಷಯಗಳನ್ನು ಸಂಗ್ರಹಿಸುತ್ತಿರುವರೆಂದೂ, ಮೊನ್ನೆಯ ದಿನ ಆಸ್ಪತ್ರೆಯಲ್ಲಿಯ ಮೂರು ರೋಗಿಗಳನ್ನು ಕಿಡ್‌ನ್ಯಾಪ್ ಮಾಡಿ

ಎರಡು ದಿನದಲ್ಲಿ ಮತ್ತೆತಂದು ಬಿಟ್ಟು ಹೋದರೆಂದೂ, ಆಲ್ಲಿ ಅವರನ್ನು ಹೆದರಿಸಿ ಒಂದು ಲಾಡ್ಜಿಂಗ್‌ಗೆ ಕರೆದುಕೊಂಡು ಹೋಗಿ, ಅವರಿಂದ ಎಲ್ಲ ವಿಷಯಗಳನ್ನು ಸಂಗ್ರಹಿಸಿಕೊಂಡಿರುವರು. ಅದೇ ವಿಷಯಗಳು ನಮ್ಮ ಹತ್ತಿರ ಇವೆಯೆಂದು ಗೋಪಾಲನಿಗೆ ಅವನ ಗೂಢಚಾರಿಗಳು ಎಲ್ಲ ವಿಷಯಗಳನ್ನು ಹೇಳಿದ್ದರು. ಗೋಪಾಲನು ರಾಮು ಹಾಗೂ ಮಿತ್ರರ ಧೈರ್ಯ ಮತ್ತು ಬುದ್ಧಿವಂತಿಕೆಯನ್ನು ಬಹಳ ಮೆಚ್ಚಿದನು. ಮತ್ತೆರಡು ದಿನಗಳು ಕಳೆದ ನಂತರ ರಾಮು, ಸ್ವಾಮಿ ಹಾಗೂ ಕಾಂತಾರಾಜರು ಗೋಪಾಲನ ಹತ್ತಿರ ಬಂದು ಎಲ್ಲ ವಿಷಯವನ್ನು ವಿವರವಾಗಿ ಹೇಳಿ, ಈ ಟೇಪ್‌ರೆಕಾರ್ಡ್‌ದಲ್ಲಿ ಎಲ್ಲ ವಿಷಯಗಳಿವೆ-ಯೆಂದು ಹೇಳಿದಾಗ, ರಾಮು ನೀನು ಮಾಡಿದ ಕೆಲಸ ಸಾಮಾನ್ಯವಾದುದಲ್ಲ, ನೀನು ನಮ್ಮ ಗೂಢಚಾರಿ ಇಲಾಖೆಯಲ್ಲಿ ಕೆಲಸ ಮಾಡಬೇಕಾಗಿತ್ತು ಎಂದು ನಗುತ್ತ ನುಡಿದು, ಅವನ್ನು ಬೇರೊಂದು ರಕಾರ್ಡ್ ಮಾಡಿ ಆದನ್ನು ಅವರಿಗೇನೆ ಮರಳಿ ಒಪ್ಪಿಸಿ, ನಾಲ್ಕಾರು ದಿನದಲ್ಲಿ ಪುನಃ ನಿಮ್ಮನ್ನು ಕಂಡು ಹೇಳುವೆನು ಎಂದು ಹೇಳಿ ಅವರನ್ನು ಬೀಳ್ಕೊಡುತ್ತ, ಈ ವಿಷಯ ನಮ್ಮ ನಾಲ್ಕುಜನರ ವಿನಹ: ಯಾರಿಗೂ ತಿಳಿಯಬಾರದು. ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡು ಎಂದಿದ್ದಾರೆ ಹಿರಿಯರು ಎನ್ನಲು, ಸರಿ ಎಂದು ಎಲ್ಲರೂ ತಲೆದೂಗಿ ಆಲ್ಲಿಂದ ಹೊರಡುವರು.

ರಾಮು ಅಲ್ಲಿಂದ ನೇರವಾಗಿ ಆನಂದನ ಹತ್ತಿರ ಹೋಗಿ ಎಲ್ಲವಿಷಯ ಹೇಳುವನು. ಆಗ ಆನಂದ ಕ್ರೋಧದಿಂದ ಅವರನ್ನು ಸುಟ್ಟುಬಿಡುವೆನು ಎಂದು ರೇಗಾಡುವನು. ನಂತರ ರಾಮು ಆನಂದನಿಗೆ ಸಮಾಧಾನ ಹೇಳಿ, ಈ ವಿಷಯ ಮಧುಕರನಿಗೆ ಹೇಳುವದು ಬೇಡವೆಂದು ರಾಮು ನುಡಿದಾಗ, ಇಲ್ಲ ರಾಮು ನಾನು ನೀನೂ ಸೇರಿಯೇ ಹೇಳೋಣ. ಮನಸ್ಸಿಗೆ ಸಮಾಧಾನ ಆದರೂ ಆಗಬಹುದು ಎಂದು ನುಡಿದು, ನೀನು ಮುಂದೆ ಹೋಗು, ನಾನು ಗೋಪಾಲನಿಗೆ ಈ ವಿಷಯ ತಿಳಿಸಿ ಬರುವೆನು ಎಂದು ಹೇಳಲು, ರಾಮು ಹೂಂ ಎಂದು ಮಧುಕರನ ಕೋಣೆಯತ್ತ ಬರುವನು.

ಕೋಣೆಯ ರೂಮು ಅರ್ಧಸರ್ಧ ತೆರೆದಿದ್ದು ಒಳಗಡೆ ಮಧು ಹಾಗೂ ಕಮಲ ಮಾತನಾಡುತ್ತ ಕುಳಿತಿದ್ದನ್ನು ಕಂಡು ಹೊರಗೆ ನಿಲ್ಲುವನು. ಇದೇ ತರಹ ಊಟ ನಿದ್ರೆಯಿಲ್ಲದೆ ಕುಳಿತರೆ ನಿಮ್ಮ ಶರೀರದ ಗತಿಯೇನಾಗುವದು ಎಂದು ವಿಚಾರಿಸಿದ್ದೀರಾ, ಎಲ್ಲವನ್ನು ತ್ಯಜಿಸಿಕುಳಿತರೆ ಹೋದವರು ಮರಳಿ ಬರುವರೆ? ಭೂಮಿಯ ಮೇಲೆ ಜೀವಿಸುವ ಯಾವಪ್ರಾಣಿಯೂ ಸ್ಥಿರವಾದುದಲ್ಲ. ಎಲ್ಲವನ್ನು ಅರಿತವ-ರಾದ ನೀವೇ ಹೀಗೆ ಧೈರ್ಯಗುಂದಿದರೆ ಹೇಗೆ, ನಿಮಗೆ ಸತ್ತು ಸ್ವರ್ಗಸ್ಥರಾದ ಅತ್ತೆ-ಮಾವಂದಿರಷ್ಟೇ ಬಂಧುಗಳಲ್ಲ, ಈಡೀ ಶ್ರಮಿಕ ಬಾಂಧವರೆಲ್ಲರೂ ನಿಮ್ಮ ಬಂಧುಗಳು, ಅವರ ಭಾರಹೊತ್ತ ನೀವು ಧೈರ್ಯದಿಂದ ಸಹಿಸಿಕೊಳ್ಳಬೇಕು. ಅವರೆಲ್ಲರನ್ನು ಕ್ರೂರಯಾತನೆಯಿಂದ ಮುಕ್ತಗೊಳಿಸಿ ಮಾನವತಾವಾದಿಯಲ್ಲಿ ಮುನ್ನಡೆಯುವಂತೆ ಮಾಡುವದು ನಿಮ್ಮ ಆಧ್ಯಕರ್ತವ್ಯವೆಂಬುವು ಮರೆತಿರಾ ಎಂದು ಕಮಲ ಕೇಳಿದಾಗ, ಆ ಮಾರ್ಗ ಅಷ್ಟೊಂದು ಸುಲಭವಲ್ಲ ಕಮಲ. ಆ ಮಾರ್ಗದಲ್ಲಿ ಹೋಗಲು ಪ್ರಯತ್ನಪಡುತ್ತಿರುವದರಿಂದಲೇ ದೇವರಂತಹ ಸಂಗಪ್ಪ ಮಾಸ್ತರರು ಬಲಿಯಾದರು. ಇಂದು ನಿರಪರಾಧಿಗಳಾದ ಅತ್ತೆಮಾವ ಜೊತೆಗೆ ಮಂಜುಳಾ ಸಹ ಬಲಿಯಾಗಬೇಕಾಯಿತು. ಇನ್ನೂ ಮುಂದೆ ಯಾರ ಸರಧಿಯಿದೆಯೋ ಯಾರಿಗೊತ್ತು. ಆದಕ್ಕೆ ಈ ದಾರಿಯನ್ನು ಇಂದಿನಿಂದ ಬಿಟ್ಟುಬಿಡೋಣ. ವಿನಾಕಾರಣ ಈ ದುಷ್ಟರಿಗೆ ಆಹುತಿ ಯಾಗುವದು ಬೇಡ, ಎಂದು ದುಃಖಿಸುವನು. ಮಧುಕರನ ಈ ದುಃಖವನ್ನು ಕಂಡು ತಾನೂ ದುಃಖದಿಂದ ಆತನ ಕೈಗಳನ್ನು ಹಿಡಿದು, ಬೇಡ ಮಧುಕರ ಈ ನಿರ್ಧಾರಕ್ಕೆ ಬರಬೇಡಿ. ಇಲ್ಲಿಯವರಗೆ ಹಗಲಿರುಳು ಶ್ರಮಿಸಿ ಸಾದಿಸಿದ ಈ ಸಾಧನೆ ಮಣ್ಣುಪಾಲಾಗುವದು. ನಾವು ಹಿಂಜರಿದರೆ ದುಷ್ಟಶಕ್ತಿಗೆ ಮತ್ತಷ್ಟು ಬಲಬಂದು ನ್ಯಾಯದ ಸಂಪೂರ್ಣ ಕೊಲೆಯಾಗುವದು. ದಯವಿಟ್ಟು ಹಿಂದೆ ಸರಿಯಬೇಡಿ ಎಂದು ಕಮಲಾಳೂ ದುಃಖಿಸುವಳು.

ಈರ್ವರ ಯಾತನೆಯನ್ನು ಕಂಡು ರಾಮು, ಕೆಲ್ಪ್ರ ಒಂದೆರಡು ನಿಮಿಷದ ನಂತರ ಒಳಗೆ ಹೋಗುತ್ತ ಓ ಕಮಲಾ ನೀನಿದ್ದಿಯಾ

ಬಹುಶಃ ವಿಮಲಾ ಇರಬಹುದಂತ ಮಾಡಿದ್ದೆ. ಯಾಕೆ ಕಮಲಾ ಮುಖಸಪ್ಪಗಾಗಿದೆ ಎನ್ನಲು, ಏನಿಲ್ಲವೆಂದು ಕಮಲಾ ಮಧುಕರನ ಮುಖ ನೋಡಲು, ಏನು ಮಧು ಯಾಕೆ ಕಣ್ಣೆಲ್ಲ ಉದಿಕೊಂಡಿದೆ ಎನ್ನಲು, ರಾಮು ನನಗೆ ಈ ದಾರಿಯಲ್ಲಿ ಮುಂದೆ ಹೋಗಲು ಮನಸ್ಸಿಲ್ಲ, ನೋಡು ಈ ಪತ್ರಿಕೇನ ಮಧುರವರ ಹಿತವಾದ ಲೇಖನ ಗಳು ಎಂಥವರನ್ನಾದರೂ ರೊಚ್ಚಿಗೆಬ್ಬಿಸುತ್ತಿರುತ್ತವೆ. ಬಹುಶಃ ಅವರ ಬಂಧುಗಳು ದುರ್ಮರಣ ಹೊಂದಲು ಲೇಖನಗಳೇ ಕಾರಣವೆಂದು ಬರೆದಿದೆ. ಇಲ್ಲಿಯವರೆಗೆ ಆದ ಅನಾಹುತಗಳೇ ಸಾಕು. ನನ್ನ ಬಂಧುಮಿತ್ರರನ್ನು ಕಳೆದುಕೊಂಡು ನಾನಿರಲು ಬಯಸುದಿವುಲ್ಲ ಎಂದು ದುಃಖಿಸುವನು. ಮಧು ಅಂದು ಮಾಸ್ತರರು ಹೇಳಿದ ಮಾತುಗಳು ನೆನಪಿನಲ್ಲಿಲ್ಲವೆ, ಕುಟುಂಬ ಜೀವನ ಕ್ರಾಂತಿಕಾರಿಶಕ್ತಿಯ ಬಲವನ್ನು ಕಡಿಮೆ ಮಾಡುವದು. ಮಡದಿ, ಮಕ್ಕಳು, ಕುಟುಂಬಪೋಷಣೆಗಾಗಿ ದುಡಿಯಬೇಕಾದ ಅವಶ್ಯಕತೆ ಇರುವದು. ತನ್ನ ಕಾರ್ಯಕಲಾಪಗಳು ದಿನೇ ದಿನೇ ಬೆಳೆಯಲು ತನ್ನ ಶಕ್ತಿಯನ್ನು ವಿಸ್ತಾರವಾಗಿ ಹೆಚ್ಚಿಸು ತ್ತಿರಬೇಕು. ನವ ಸಮಾಜದ ಉದಯದ ಸಲುವಾಗಿ ದುಡಿಯುವ ನಾವು, ಹಗಲಿರುಳು ದುಡಿವ ರೀತಿಯನ್ನು ನೆನೆಯಿಸಿಕೋ. ಪಟ್ಟ ಶ್ರಮವನ್ನು ಮನದಟ್ಟು ಮಾಡಿಕೋ, ನಿರಾಸೆಯಿಂದಾಗಲಿ, ಜನರ ನಿಂದೆಯಿಂದಾಗಲಿ, ಆದೈರ್ಯಹೊಂದಿ ಹಿಂದೆ ಸರಿದರ ನಮ್ಮ ಧ್ಯೆಯಕ್ಕೆ ಬಹುದೊಡ್ಡ ಕೊಡಲಿಪೆಟ್ಟು ಬೀಳುವದು. ನಮ್ಮ ಧ್ಯೆಯ ಸ್ವಾರ್ಥ ಸಾಧನೆಗಾಗಿ ಅಲ್ಲ. ಮಾನವ ಕುಲದ ಉದ್ಧಾರಕ್ಕಾಗಿ, ಮಾನವನ ಹೃದಯಗಳನ್ನು ಗೆಲ್ಲಿದ್ದೇವೆ. ಇನ್ನೂ ಗೆದ್ದು ಧರ್ಮಯುದ್ಧವನ್ನು ಮಾಡುವಕಾಲ ಸಮೀಪ ಬಂದಿದೆ. ನೀನು ಹಿಂದೆ ಸರಿದರೆ ಹೇಗೆ ಮಧು, ಹೇಡಿಗಳಂತೆ ಹಿಂದೆ ಸರಿದರೆ ದುಷ್ಕರ್ಮಿಗಳ ಜಯಕ್ಕೆ ದಾರಿಯನ್ನು ಮಾಡಿಕೊಟ್ಟಂತಾಗುವದು. ಬೇಡ ಮಧು ಹಿಂಜರಿಯ ಬೇಡವೆಂದು ಅಂಗಲಾಚುವನು

ಅದೆಲ್ಲ ನಿಜ ನನಗೆ ನನ್ನ ಬಂಧುಭಾಂದವರು ಹೋದವರೆಂದು ಭಯವಿಲ್ಲ. ಆದರೆ ನನ್ನ ಮಿತ್ರರನ್ನು ಕಳೆದುಕೊಳ್ಳಲು

ನನಗೆ ಮನಸ್ಸಿಲ್ಲ ರಾಮು ಎಂದು ದುಃಖದಿಂದ ನುಡಿಯಲು, ಹೌದು ಮಧು ಈ ಗುಂಪಿನಲ್ಲಿ ಎಲ್ಲರೂ ಒಂದೊಂದರಿಂದ ದೂರವಾದವರೇ ಇದ್ದೇವೆ. ಮೊನ್ನೆ ನಡೆದ ದುರ್ಘಟನೆಯಿಂದ ನಮ್ಮ ಮನಸ್ಸೇ ಒಂದುತೆರನಾಗಿದೆ. ಆವರು ನಿನಗಷ್ಟೇ ಬಳಗವಲ್ಲ ಮಧು, ನಮ್ಮೆಲ್ಲ-ರಿಗೂ ಬಳಗ, ನಾವೆಲ್ಲರೂ ಒಂದು ಶರೀರದ ಅಂಗಗಳಿದ್ದಂತೆ ಇದ್ದೇವೆ. ನೀನು ದಿನಾಲು ಊಟಮಾಡಿದರೆ ನಾವೂ ಮಾಡತೇವೆ. ಇಲ್ಲದಿದ್ದರೆ ಇಲ್ಲ. ನೀನು ಊಟಮಾಡಿದಷ್ಟೇ ನಾವೂ ಊಟವನ್ನು ಮಾಡುತ್ತಿದ್ದೇವೆ. ಒಂದು ಶರೀರದ ಯಾವದೇ ಭಾಗಕ್ಕೆ ಗಾಯವಾದರೆ ಅದು ಇಡೀ ಶರೀರಕ್ಕೆ ಸಂಬಂಧವಿಲ್ಲವೆ ಎನ್ನಲು. ಮಧು ಗಾಬರಿ-ಯಿಂದ ರಾಮುನನ್ನು ಅಪ್ಪಿಕೊಂಡು, ರಾಮು ನಿಮ್ಮೆಲ್ಲರೆದುರು ನಾನು ಅತ್ಯಲ್ಪಕಣೋ, ಅತ್ಯಲ್ಪ. ನಾಲ್ಕಾರು ದಿನದಿಂದ ನನ್ನ ತಲೆಯಲ್ಲಿ ಅದೇನು ಸೇರಿಕೊಂಡಿತ್ತೋ, ಈ ವಿಚಾರಬಿಟ್ಟು ಬೇರೆ ವಿಚಾರವೇ ತಲೆಯಲ್ಲಿ ಹೋಗತಾಯಿರಲಿಲ್ಲ. ಎಂದು ಮಧು ನುಡಿ-ಯಲು, ಆನಂದ ಹಾಗೂ ಗೋಪಾಲ ಬರುವರು. ಅದು ಸಹಜ-ವಾದ ಭಾವನೆ ಮಧು, ಮನದಲ್ಲಿ ಯಾವದಾರೂ ಅಹಿತಕರವಾದ ಘಟನೆ ಮೂಡಿಕೊಂಡಾಗ ಅಲ್ಲಿ ವಿಚಾರಶಕ್ತಿ ಬೆಳೆಯಲು ಅವಕಾಶ ವಿರುವದಿಲ್ಲ. ಆದದ್ದೆಲ್ಲವನ್ನು ಮರೆತು, ಬದುಕಿ ಸಾಧಿಸಬೇಕಾದ ಕಾರ್ಯ-ಗಳತ್ತ ಲಕ್ಷಕೊಡುವದು ನಿನ್ನ ಕರ್ತವ್ಯ. ನಿನ್ನನ್ನೇ ನಂಬಿದ ಈ ಕಾರ್ಯ ಕರ್ತರನ್ನು ಧೈರ್ಯದಿಂದ ಮುನ್ನುಗ್ಗಲು ಹೇಳು. ಅದೆಲ್ಲವನ್ನು ಬಿಟ್ಟು ಅನ್ನ ಆಹಾರವಿಲ್ಲದೆ ಕುಳಿತರೆ ಏನು ಸಾಧಿಸಿದಂತಾಗುವದು ಎಂದು ಗೋಪಾಲ ನುಡಿದು ಮಧುಕರನಿಗೆ ಧೈರ್ಯಹೇಳಿ ಕಮಲ ಳನ್ನು ಕರೆದುಕೊಂಡು ಮನೆಗೆ ಹೋಗುವನು.

೨೬

ಗೋಪಾಲ ಮಧುಕರನ ವಿಚಾರವಾಗಿ ಕಮಲಳನ್ನು ಕೇಳಿ-ದಾಗ ನಾನು ಜೀವನದಲ್ಲಿ ಸಾಧಿಸಬೇಕಾದದ್ದೇನಿದೆ? ಭಾರತೀಯ ನಾರಿ ಪ್ರೀತಿಸುವದು ಒಂದೇ ಗಂಡನ್ನ, ಕೊನೆಯವರೆಗೂ ಆತನಲ್ಲಿಯೇ

ಮನಟ್ಟುಕೊಂಡು ಜೀವನವನ್ನ ಕಳೆಯುವದು ಆಕೆಯ ಆಧ್ಯ ಕರ್ತವ್ಯ, ಎಂದು ದೃಡವಾಗಿ ಹೇಳಿದಾಗ, ಗೋಪಾಲ ಬೀತಿ-ಗೊಂಡನು. ಕಮಲಾ ನಿನ್ನ ಮನಲ್ಲಿ ಯಾರಿದ್ದಾರೆಂಬುದು ಹೇಳ ಬಯಸುವೆಯಾ ಎನ್ನಲು, ಆ ವಿಷಯದ ಬಗ್ಗೆ ಅಷ್ಟೊಂದು ಆತುರ ಬೇಡಣ್ಣ ಒಂದಲ್ಲ ಒಂದು ದಿನ ನನನೇ ಹೇಳತೀನಿ ಎಂದು ಕಮಲಾ ನುಡಿದಾಗ, ಕಮಲಾ ನೀನು ದಯುವಿಟ್ಟು ತಪ್ಪು ತಿಳಿದುಕೊಳ್ಳ ಬೇಡ ನಿನ್ನ ಮನದಲ್ಲಿ ಮಧುಕರನ ಮೂರ್ತಿಯಿದೆ ಎಂದು ನಾನು ಅರ್ಥಮಾಡಿಕೊಂಡಿರುವೆ, ನನ್ನ ಅರ್ಥ ಸರಿಯಾದದ್ದೇ ? ಎಂದು ಗೋಪಾಲ ಕೇಳಲು, ಹೌದಣ್ಣ ಎಂದು ನಾಚಿ ಮುಖವನ್ನು ಕೆಳಗೆ ಮಾಡುವಳು. ಕಮಲಾ ಈ ವಿಷಯುವನ್ನು ಮಧುಕರನಿಗೆ ಹೇಳಿ-ರುವೆಯಾ. ಅವನು ನಿನ್ನನ್ನು ಒಪ್ಪುವನೇ ಎಂದು ಗೋಪಾಲ ಕೇಳಿದಾಗ, ನಾನವರನ್ನ ಕೇಳಿಲ್ಲ. ಆ ಧೈರ್ಯನನಗಿನ್ನು ಬಂದಿಲ್ಲ ವೆಂದು ಕಮಲಾ ನುಡಿದಾಗ, ಕಮಲಾ ನೀನು ನಿನ್ನ ಹಾದಿಯನ್ನು ಬದಲಾಯಿಸುವ ಪ್ರಸಂಗನರುವದಂತೂ ಖಚಿತವೆಂದು ನನಗನ್ನಿಸುವದು ಆದೇಕೆ ಬದಲಾಯಿಸಬೇಕೆಂದು ಆತುರದಿಂದ ಕೇಳುವಳು. ಮಧುಕರ ಮನೆಯವರ ದುರ್ಮರಣಕ್ಕೆ ಕಾರಣಯಾರು ಗೊತ್ತಾ ಎನ್ನಲೂ ಯಾರು ಎಂದು ಕಮಲಾ ಅತೀ ಉತ್ಸಾಹದಿಂದ ಕೇಳಲು ದೀಪಕ ಹಾಗೂ ಕಾಮೇರ ಕೈವಾಡದಿಂದ ಅವರು ಮರಣಕ್ಕೀಡಾದರೂ. ಮೂರ್ಖರು, ಹೇಡಿಗಳು, ಎದುರಿಗೆ ನಿಂತು ಕಾದಾಡುವ ಶಕ್ತಿಯಿಲ್ಲವೆ ತೆರೆಯ ಮರೆಯಲ್ಲಿ ನಿಂತು ಆಟವನ್ನು ಆಡಿದರು. ನಾಯಿಗಳು ಎಂದು ನುಡಿಯಲು, ಸಾವಕಾಶಮಾತಾಡು ಕಮಲಾ ಇದು ಆಫೀಸು ಎಂದು ನುಡಿದಾಗ, ಅಣ್ಣಾ ಅವರನ್ನು ಸೆರೆಹಿಡಿಯುವದಿಲ್ಲವೆ ? ಈಂಥಹ ನೀಚರನ್ನು ಜೀವಸಹಿತ ಸುಡಬೇಕೆಂದು ಅನ್ನಿಸುವದು ಎಂದು ಕಮಲಾ ಕೋಪದಿಂದ ನುಡಿಯಲು, ಇನ್ನು ಒಂದೆರೇಡು ದಿನದಲ್ಲಿ ಅವರನ್ನು ಬಂಧಿಸುವೇನು. ಈ ವಿಷಯುವನ್ನು ಯಾರ ಮುಂದೆಯೂ ಹೇಳಬಾರದು ಎನ್ನಲು, ಇಲ್ಲವೆಂದು ತಲೆಯಾಡಿಸು-ವಳು, ಈಗ ಹೇಳು ಕಮಲ ಈ ವಿಷಯ ಮಧುಗೆ ಗೊತ್ತಾದರೆ

ನಿನ್ನನ್ನು ಯಾವರೀತಿ ಕಾಣಬಹುದು. ಅವನ ಬಂಧುಬಳಗವನ್ನೇ ನಾಶಮಾಡಿದ ಮನೆತನದವಳಾದ ನಿನ್ನನ್ನು ಆದರಿಸುವನೇ ವಿಚಾರ ಮಾಡೆಂದು ಗೋಪಾಲ ನುಡಿಯಲು, ಅವರು ನನ್ನ ಬಗ್ಗೆ ತಪ್ಪು ತಿಳಿಯಲಾರರೆಂಬ ದೃಢವಾದ ನಂಬಿಗೆ ನನಗಿದೆ ಎಂದು ಕಮಲಾ ನುಡಿದಾಗ, ನಿನ್ನ ನಂಬಿಗೆ ದೃಢವಾದದ್ದಾದರೆ ನೀನು ಅದೃಷ್ಟವಂತೆ, ಯಾವದಕ್ಕೂ ನೀನು ನಿನ್ನದೆಲ್ಲವನ್ನು ತೊರೆದು ಮಧುನ ಸಹವಾಸ ಬಯಸಿದ್ದೀಯಾ, ನಿನ್ನ ಅದೃಷ್ಟ ಹೇಗಿದೆಯೋ ಯಾರಿಗೆ ಗೊತ್ತು, ಎಂದು ಗೋಪಾಲ ನುಡಿದು ನಿಟ್ಟುಸಿರನ್ನು ಬಿಡುವನು. ಏಳು ಕಮಲಾ ಮನೆಗೋಗೋಣ ಎನ್ನಲು ಈರ್ವರೂ ಮನೆಗೆ ಹೋಗುವರು.

## ೨೭

ಕಮಲಾ ಕೋಣೆಯಲ್ಲಿ ನಿದ್ರೆಬಾರದೇ ಹೊರಳಾಡುತ್ತ ಸುಮ್ಮನೆ ಹಾಸಿಗೆಯಮೇಲೆ ಬಿದ್ದುಕೊಂಡಿದ್ದಾಳೆ. ನಿನ್ನೆ ಭಾಗ್ಯಳಿಂದ ಬಂದ ಪತ್ರವು ಅವಳನ್ನು ಗಾಬರಿಗೊಳಿಸಿತ್ತು. ಭಾಗ್ಯ ತನ್ನ ಬಾಲ್ಯ ಸ್ನೇಹಿತೆ, ಅಷ್ಟೆಅಲ್ಲ ಯಾವತ್ತು ನಗರದಲ್ಲಿ ಕೂಡಿಯೇ ಬೆಳದವರು. ಈರ್ವರೂ ಕಾಲೇಜನ್ನು ಒಮ್ಮೆಲೆ ಸೇರಿದವರು. ಒಂದೆರೆಡು ವರ್ಷದ ನಂತರ ಅವಳು ವೈದ್ಯಕೀಯ ಪದವಿಪಡೆಯಲು ದಾವಣಗೇರಿ ನಗರಕ್ಕೆ ಹೋದಳು. ಅವಳು ಊರಿಗೆ ಬಂದರೆ ಈರ್ವರೂ ಒಟ್ಟಿಗೇನೆ ಇರು-ತ್ತಿದ್ದೆವು. ಆದರೆ ಅವಳ ವೈಯಕ್ತಿಕ ವಿಚಾರದ ಬಗ್ಗೆ ನಾನೂ ಕೇಳಿರಲಿಲ್ಲ. ನನ್ನ ವಿಚಾರವಾಗಿ ಅವಳೂ ಕೇಳಿರಲಿಲ್ಲ. ಆದರೆ ಮೊನ್ನೆ ಬಂದಾಗ ರಾಮುನ ಸಂಗಡ ಬಸವೇಶ್ವರ ದೇವಸ್ಥಾನದ ಬಳಿ ಕುಳಿತು ಮಾತನಾಡಿದ್ದನ್ನು ನೋಡಿದಾಗ ಅವಳ ಅಂತರಂಗದ ವಿಷಯ ಬಹಿರಂಗವಾಯಿತು.

ಅಂದು ಸೋಮವಾರವಾದ್ದರಿಂದ ನಾನು ನನ್ನ ತಾಯಿಯ

ಸಂಗಡ ದೇವಸ್ಥಾನಕ್ಕೆ ಹೋಗಿದ್ದೆ, ದೂರದಲ್ಲಿ ಅವರಿಬ್ಬರು ನಗುತ್ತ ಕುಳಿತಿದ್ದನ್ನು ಕಂಡು ಗಾಬರಿಗೊಂಡು ತಾಯಿಯ ಸಂಗಡ ಒಳಗೆ ಹೋದೆ. ನಂತರ ಹೊರಗೆ ಬಂದು ಅವರನ್ನು ಕಂಡು ಕಾಣದವರ ಹಾಗೆ ಹೋಗುತ್ತಿರುವಾಗ, ಏ ಕಮಲಾ ಬಾರೇ ನೋಡೀ ನೋಡದವರ ಹಾಗೆ ಹೋಗತಿಯಲ್ಲೇ ಎಂದು ಭಾಗ್ಯ ನುಡಿದಾಗ, ಓ ಸೀನಾ! ನಾನು ಬೇರೆಯಾರನ್ನೋ ಮಾಡಿದ್ದೆ, ನಾನ ಬರತೀನಿ ನಮ್ಮ ತಾಯಿಯಿದ್ದಾರೆ ಎನ್ನಲು, ಅವರೊಬ್ಬರೆ ಕಾರಲ್ಲಿ ಹೋಗತಾರೆ, ನಾನು ನೀನು ಆಮೇಲೆ ಹೋಗೋಣ ಬಾ ಎಂದು ಭಾಗ್ಯ ನುಡಿಯಲು, ಏನಮ್ಮಾ ಭಾಗ್ಯ ದೇವಸ್ಥಾನಕ್ಕೆ ಬಂದಿದಿಯಾ ಎಂದು ಶಾಂತಮ್ಮ ಕೇಳಲು, ಹೌದಮ್ಮ. ಅಮ್ಮ ನಾವು ಸ್ವಲ್ಪ ಹೊತ್ತು ಕುಳಿತು ಬರತೀವಿ ಎಂದು ಭಾಗ್ಯ ಕೇಳಲು, ಸರಿ ನಿಮ್ಮಿಷ್ಟ ಎಂದು ಹೊರಡಲು ಅನುವಾಗುವರು ಆಗ ಕಮಲಾ, ಬೇಡಮ್ಮಾ ನಾನೂ ಬರತೀನಿ ಎನ್ನಲು, ಭಾಗ್ಯ ಕಮಲಳ ರಟ್ಟೆಯನ್ನು ಹಿಡಿದು ಒಂದರ್ಧ ಗಂಟೆ ಅಷ್ಟೇ ಕಣೇ ಎನ್ನಲು ಅವಳು ಅಷ್ಟೊಂದು ಕೇಳತಾಳೆ ಹೋಗು, ಅವಳೂ ಒಬ್ಬಳೇ ಆಗತಾಳೇ ಇಬ್ಬರೂ ಸೇರಿ ಬನ್ನಿರೆಂಬು ಹೇಳಿ, ಕಾರನ್ನು ಹತ್ತಲು ಕಾರು ಹೊರಟು ಹೋಗುವದು.

ಅಲ್ಲೇ, ನಾನೇಕೆ ಅಲ್ಲಿ ಮಧ್ಯ, ಶಿವಪೂಜಿಗೆ ಕರಡಿಬಿಟ್ಟಹಾಗೆ ಎಂದು ಕಮಲಾ ಮುನಿಸಿನಿಂದ ನುಡಿದಾಗ, ಕಂಡಿದೀನಿ ಬಾರೇ ಎಂದು ಆಕೆಯ ಗಲ್ಲವನ್ನು ಹಿಸುಕಿ ರಾಮುನ ಹತ್ತಿರ ಹೋಗುವಳು. ಕಮಲಾ ತಪ್ಪಿಸಿಕೊಂಡು ಹೊಂಟಿದ್ದಳೂಂತ ಕಾಣುತ್ತೆ ಎಂದು ರಾಮು ಕೇಳಿದಾಗ, ಹೌದು ನಿಮ್ಮಿಬ್ಬರ ಮಧ್ಯ ನಾನೇಕೆ ಶಿವಪೂಜೆಗೆ ಕರಡಿಬಿಟ್ಟಹಾಗೇಂತ ಅಂದಳು ಎಂದು ನಗುವಳು. ಹಾಗೆನಿಲ್ಲ ಕಮಲಾ ಈ ಮಿಲನ ಹೊಸದೇನಲ್ಲ ಸುಮಾರು ಒಂದು ವರ್ಷದಿಂದ ನಡೀತಾಯಿದೆ ಎಂದು ರಾಮು ನುಡಿದಾಗ, ಹೌದೇನೇ ನನ್ನ ಹತ್ತಿರ ಸ್ವಲ್ಪನೂ ಹೇಳಿಲ್ಲನಲ್ಲೇ ಭಾಗ್ಯ ಎಂದು ಕಮಲಾ

ನುಡಿದಾಗ, ನೀನು ಕೇಳಿಲ್ಲ ಸಾನ್ಹೇಳಿಲ್ಲ ಎಂದು ಭಾಗ್ಯ ನುಡಿದು ನಮ್ಮ ಈ ಪ್ರೇಮ ಮಿಲನ ಹೊಂದಿದ್ದು ದಾವಣಗೇರೆಯಲ್ಲಿ. ಅದು ಅವರಿಗೆ ಆಯಿತೋ ಇಲ್ಲೋ ಗೊತ್ತಿಲ್ಲ. ನನಗೆ ಮಾತ್ರ ಅಲ್ಲಿ ಆವರಿಸಿಕೊಂಡಿತು ಅಂದು ಇವರು ತಮ್ಮ ಪತ್ರಿಕೆಯ ಪ್ರತಿನಿಧಿಯಾಗಿ ಆ ಸಮಾರಂಭದಲ್ಲಿ ಭಾಗವಹಿಸುತ್ತಿದ್ದರು. ಮರುದಿವಸ ಕಾಲೇಜಿನಲ್ಲಿ ಅದೇ ವಿಚಾರಗಳನ್ನು ಎಲ್ಲರೂ ಚರ್ಚಿಸುವರೇ, ನನಗೆ ಮೈಯಲ್ಲಿ ಆರಾಮವಿಲ್ಲದ ಕಾರಣದಿಂದ ನಾನು ಅಲ್ಲಿಗೆ ಹೋಗಿರಲಿಲ್ಲ. ವಿದ್ಯಾರ್ಥಿ ಪರಿಷತ್ತಿನ ಕೆಲವರು ನನ್ನ ಹತ್ತಿರ ಬಂದುಅವರು ನಿಮ್ಮ ಊರಿನವರಂತೆ ಅವರನ್ನು ನಮ್ಮ ಸಂಘ ಬರಮಾಡಲು ಮನಸ್ಸುಮಾಡಿದೆ ನೀವು ಸ್ವಲ್ಪ ಅವರನ್ನು ಹೇಳಿ ಒಪ್ಪಿಸಬೇಕು ಎಂದು ಹೇಳಿದಾಗ, ನಾನು ಒಪ್ಪಿ ಕೊಂಡು ಅವರಿದ್ದ ರೂಮಿಗೆ ಪ್ರಥಮಸಲ ಹೋದೆ, ಅಲ್ಲಿ ಮಧುಕರ ಹಾಗು ರಾಮು ಮಾತನಾಡುತ್ತ ಕುಳಿತಿದ್ದರು. ಅವರೆದುರಿಗೆ ವಿಷಯ ವನ್ನು ಹೇಳಿದಾಗ, ನೋಡು ಭಾಗ್ಯ ನಮ್ಮನ್ನುರಾತ್ರಿ ಎಂಟುವರೆಗೆ ಬಿಟ್ಟು ಬಿಡಬೇಕೆಂದು ಹೇಳಿ ಅಂದಿನ ಕಾರ್ಯಕ್ರಮಕ್ಕೆ ಬಂದರು.

ಅಲ್ಲಿ ಇವರ ಸಂಗಡ ಅನೇಕ ಮೇಧಾವಿಗಳುರಾಜಕೀಯ ವ್ಯಕ್ತಿ ಗಳು, ಉಪನ್ಯಾಸಕರು ಚರ್ಚೆಯಲ್ಲಿ ಭಾಗವಹಿಸಿದ್ದರು. ವಾಸ್ತವವಾಗಿ ಶ್ರೀಮಂತರೇ ನಮಗಿಂತಲೂ ಹೆಚ್ಚಿನ ಗುಲಾಮರು. ನಾವು ಮಾತ್ರ ಶಾರೀರಿಕವಾಗಿ ಬಂದಿತರಾಗಿದ್ದೇವೆ, ಆಧ್ಯಾತ್ಮಿಕವಾಗಿ ಶ್ರೀಮಂತವರ್ಗ ಬಡವರಾಗಿದ್ದಾರೆ ಆದರೆ ದುಡಿಯುವವರ್ಗ ಸೌಹಾರ್ಧತೆಯ ತಿಳು- ವಳಿಕೆಯಲ್ಲಿ ಮುಂದುವರೆದಿದ್ದಾರೆ. ಈ ಶ್ರೀಮಂತವರ್ಗ ಮಾನವನ ಮೇಲೆ ಹೊರಸಿರೋ ನಾನಾಪ್ರಕಾರದ ಶಾರೀರಿಕ ಮತ್ತು ನೈತಿಕ ದಾಸ್ಯಕ್ಕೆ ಎದಿರಾಗಿ, ಸ್ವಾರ್ಥದ ಹಿತದ ಸಲುವಾಗಿ ಮಾನವ ಜೀವಿಗಳನ್ನು ಮರ್ಧಿಸುವ, ಎಲ್ಲ ವಿಧಾನಗಳಿಗೆ ವಿರೋಧವಾಗಿ ಹೋರಾಡಬೇಕಾಗಿದೆ. ಮನುಷ್ಯನು ತಾನು ಕಳೆದುಕೊಂಡ ಮನುಶ್ಯ- ತ್ವವನ್ನು ಹುಡುಕಲು ಸರಳವಾದ ದಾರಿಯನ್ನು ಹೇಳಿಕೊಡಬೇಕಾ- ಗಿದೆ, ಎಂದು ಮಧುಕರ ಹೇಳಿದನು.

ನಮಗೆ ಸ್ವತಂತ್ರ ಸಿಕ್ಕು ಸುಮಾರು ನಲವತ್ತು ವರುಷ ಕಳೆದರೂ ಬಡತನ ಹೋಗಲಿಲ್ಲ. ಮಾನವನಿಗೆ ಬದುಕಲು ಬೇಕಾದ ಅನ್ನ ಆಹಾರ, ಅರಿವೆಗಳು ಇಲ್ಲದಾಗಿವೆ. ಸ್ವತಂತ್ರಸಿಕ್ಕಿರುವುದು ನಮಗಲ್ಲ ಶ್ರೀಮಂತರಿಗೆ. ಬಡವರನ್ನು ದುಡಿಸಿಕೊಂಡು ಅವರ ರಕ್ತದ ಋಣದಿಂದ ದೊಡ್ಡ ದೊಡ್ಡ ಬಂಗಲೆಗನ್ನು ನಿರ್ಮಿಸಿಕೊಂಡು, ದೇಶದ ಆರ್ಥಿಕ ಸೂತ್ರವನ್ನೇ ತಮ್ಮ ಕೈಯಲ್ಲಿ ತೆಗದುಕೊಂಡು,ಎಲ್ಲರನ್ನೂ ಆಟವಾಡಿಸುತ್ತಲಿರುವ ಈ ಬಂಡವಾಳಶಾಹಿಗಳಿಗೆ ಬಂದಿದೆ ಸ್ವಾತಂತ್ರ್ಯ. ನಮ್ಮ ದೇಶದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ನಿರುದ್ಯೋಗ ಸಮಸ್ಯೆ, ಅಸ್ಪೃಶ್ಯತಾ ಸಮಸ್ಯೆಯನ್ನು ಬಗೆಹರಿಸುವದಂತೂ ಇವರಿಂದ ಸಾಧ್ಯವೇ ಇಲ್ಲ. ದೇಶದಲ್ಲಿ ಬಡತನವನ್ನು ಹೋಗಲಾಡಿಸುವ ಸಲುವಾಗಿ ಅನೇಕಯೋಜನೆಗಳನ್ನು ಸರಕಾರ ಹಾಕಿಕೊಂಡಿತು. ಅದರ ಸಲುವಾಗಿ ಸಾವಿರಾರು ಕೋಟಿರುಪಾಯಿಗಳನ್ನು ಹಾಳುಮಾಡಿತು. ಆದರೆ ಅದರ ಲಾಭಪಡೆದವರೆಂದರೆ ಶ್ರೀಮಂತರು, ಕಳ್ಳನೋಟಿನ ಕದೀಮರು. ಇದರ ಲಾಭವನ್ನು ಪಡೆದು ತಾವು ಸಾಯುವವರೆಗಷ್ಟೇ ಅಲ್ಲದೆ, ನಾಲ್ಕಾರು ತಲೆಮಾರಿನವರೆಗೆ ಕುಳಿತು ತಿನ್ನುವಷ್ಟು ಆಸ್ತಿಗಳನ್ನು ಮಾಡಿಕೊಂಡರು. ಇದೇ ರೀತಿ ಇವರು ನೂರಾರು ಯೋಜನೆಗಳನ್ನು ಕಳೆದರೂ ಹೊಟ್ಟೆಗೆ ಆಹಾರವಿಲ್ಲದೆ, ದುಡಿಯಲು ಕೆಲಸವಿಲ್ಲದೆ, ಇರಲು ಮನೆಯಿಲ್ಲದೆ, ಸರಕಾರಿ ರಸ್ತೆ-ಗಳಲ್ಲಿ, ಮರದಡಿಗಳಲ್ಲಿ ಮಲುಗುವ ಬಡಜನರನ್ನು ಉದ್ಧಾರ ಮಾಡಲು ಸಾಧ್ಯವಾಗುವದಿಲ್ಲ. ಇವರ ಯಾವ ರಾಜಕೀಯ, ಸಾಮಾಜಿಕ, ಆರ್ಥಿಕ ನೀತಿಗಳು, ಶೈಕ್ಷಣಿಕ ನೀತಿಗಳು ಸರಿಯಿಲ್ಲ ಎಂದು ಮಧು ನುಡಿದಾಗ, ಬೇರೆ ಯಾವ ರೀತಿಯಲ್ಲಿ ಇದ್ದರೆ ನಮ್ಮ ದೇಶದ ಸಮಸ್ಯೆಗಳು ಬಗೆಹರಿಯುವವು ? ಎಂದು ಒಬ್ಬರು ಕೇಳಿದಾಗ, ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸರಿಸಮಾನರು, ಬಡವರು ಶ್ರೀಮಂತ-ರೆಂಬ ಬೇದಭಾವನೆ ಇರಬಾರದು. ದೇಶದ ಪ್ರಗತಿಗಾಗಿ ಎಲ್ಲರೂ ದುಡಿಯಬೇಕು. ತನಗೆ ತಿನ್ನಲು ಆಹಾರಬೇಕೆಂದರೆ ಅವನು ದುಡಿಯಬೇಕು. ಆದರ ಆರ್ಥಿಕಲಾಭವನ್ನು ಎಲ್ಲರೂ ಹಂಚಿಕೊಳ್ಳಬೇಕು. ಆತನು ಪಡೆಯುವ ಆರ್ಥಿಕಲಾಭವು ಎಲ್ಲರಿಗೂ ಸಮನಾಗಿರಬೇಕು.

ನಾನು ನನಗಾಗಿ ನನ್ನ ಪ್ರಗತಿಗಾಗಿ ದುಡಿಯುವೇ, ದೇಶದ ಉನ್ನತಿಗಾಗಿ ದುಡಿಯುವನೆಂಬ ಮನೋಭಾವನೆಯನ್ನು ಆತನ ಮನದಲ್ಲಿ ಮೂಡಿ-ಸುವುದು ಮೊದಲ ಕೆಲಸ.

ನಮ್ಮಲ್ಲಿ ನೂರಾರು ಜಾತಿಯ ಸಮಾಜಗಳಿವೆ. ಅವುಗಳನ್ನು ಎತ್ತಿಕಟ್ಟಿಯೇ ಈ ದಿನದ ನಮ್ಮ ರಾಜಕೀಯ ವ್ಯಕ್ತಿಗಳು ನಮ್ಮನ್ನು ಆಳುತ್ತಿರುವದು. ಅವರು ತಾವು ಆರಿಸಿಬಂದುದನ್ನು ಮರೆತು ತನ್ನ ನಿಜವಾದ ಕೆಲಸವನ್ನು ಮರೆತು ಸ್ವಾರ್ಥಕ್ಕಾಗಿ ದುಡಿದು, ಸರಕಾ-ರಕ್ಕೂ. ಜನತೆಗೂ ಮೋಸಮಾಡಲು ಕಲಿತನು. ಹೀಗಾಗಬಾರದು, ಎಲ್ಲರೂ ಒಂದೇ ಸಮಾಜದವರು. ನಾವೆಲ್ಲರೂ ನ್ಯಾಯ ನಿಷ್ಠೆಯಿಂದ ದುಡಿದು, ಮಾನವೀಯತೆಯನ್ನು ಅರಿತು ಸಮಾನತೆಯನ್ನು ಅರಿತು, ಸಮಾನತೆಯನ್ನು ಬಲ್ಲವರಾದ ನಾವೆಲ್ಲ ಸತ್ಯದ ಒಲವಿನ ಹಾದಿ-ಯಲ್ಲಿ ಮುಂದೆ ಹೋದರೆ, ತಾನು ಆರಿಸಿಹೋಗಿ ಪರಿಶುದ್ಧವಾದ ಆಡಳಿತವನ್ನು ಮಾಡಿದರೆ, ಎಲ್ಲರ ಹಿತವೇ ತನ್ನ ಹಿತವೆಂದು ಭಾವಿಸುವವನೇ ನಿಜವಾದ ಮಾನವ. ಇಂಥಹ ಮನುಜರು ಯಾವ ಸಮಾಜದಲ್ಲಿರುವರೋ ಅದುವೇ ಉನ್ನತಮಟ್ಟದ ಸಮಾಜ. ಅಂತಹ ಒಂದು ಸಮಾಜವನ್ನು ನಿರ್ಮಿಸಲು ನಿಮ್ಮೆಲ್ಲರ ಸಹಕಾರ ನಮಗೆ ಬೇಕು ಎಂದು ಮಧು ಹೇಳಿದಾಗ, ಈ ದಾರಿ ಅಷ್ಟೊಂದು ಸುಲಭವಾಗಿ ಸಿಗುವದೆಂಬ ಭರವಸೆ ನಿಮಗಿದೆಯೇ ಎಂದು ಮತ್ತೊಬ್ಬರು ಕೇಳಲು, ಯಾವದು ಒಳ್ಳೆಯದು ಯಾವದು ಕೆಟ್ಟದು ಎಂಬುದನ್ನು ತಿಳಿಯಲು ಯಾರು ಪ್ರಯತ್ನಪಟ್ಟು ಮುಂದೆ ಬರುವರೋ, ಎಂದು ನಮ್ಮ ಈ ಯುವಪೀಳಿಗೆ ತನ್ನ ಆಧ್ಯಕರ್ತವ್ಯವನ್ನು ಅರಿತುಕೊಳ್ಳುವದೋ, ಅಂದೇ ನಮ್ಮ ದಾರಿ ಸುಲಭವೆಂದು ತಿಳಿಯಬಹುದು. ನಾವು ತುಳಿಯುವ ದಾರಿ ಕಲ್ಲುಮುಳ್ಳುಗಳಿಂದ ಕೂಡಿದ್ದು, ಎಲ್ಲವನ್ನೂ ಎದುರಿಸಿ ಮುಂದೆ ಸಾಗಬೇಕು. ಧೈರ್ಯದಿಂದ ಮುನ್ನುಗ್ಗಿದರೆ ಸಾಧ್ಯ ಎಂದು ರಾಮು ಹೇಳಿದನು.

ಈಗ ಸಾಕಷ್ಟು ಮೇದಾವಿಗಳು ತಮ್ಮ ತಪ್ಪನ್ನು ಅರಿವುಮಾ-ಡಿಕೊಂಡು ನಮ್ಮ ಸಂಗಡ ಬಂದಿರುವರು. ವರ್ಗಬೇದವಿಲ್ಲದ, ಪರಿಶು

ದ್ಧವಾದ ಆಡಳಿತವನ್ನು ನಡೆಸಲು ನಮ್ಮ ಮುಂದಿನ ಪೀಳಿಗೆಗೆ ಮೇಲು ಕೀಳೆಂಬ ವಿಷಬೀಜ ಗೊತ್ತಾಗದ ಹಾಗೆ, ಅದನ್ನು ಬೇರುಸಮೇತವಾಗಿ ಕಿತ್ತೊಸೆದು ನವಸಮಾಜನನ್ನು ನಿರ್ಮಿಸುವಾ ಬನ್ನಿ, ನಿಮ್ಮಂಥಹ ಯುವ ಶಕ್ತಿಯೇ ನಮ್ಮ ದೇಶದ ಸ್ವಾತಂತ್ರ್ಯ ದೊರಕಿಸಿಕೊಟ್ಟಿತು. ಅದು ಉಳಿಯಲು ಪರಿಶುದ್ಧವಾದ ಆಡಳಿತೆಯನ್ನು ನಡೆಸಲು ಮತ್ತೇ ಈ ಯುವಶಕ್ತಿ ಮುಂದೆ ಬರಬೇಕಾಗಿದೆ ಎಂದು ಮಧುಕರ ಹೇಳಿದ. ಈ ಚರ್ಚೆಗಳು ನಡೆದಾಗ ಜನರೆಲ್ಲ ಎಷ್ಟೊಂದು ಸ್ಥಬ್ದದಿಂದ ಕುಳಿತಿದ್ದರು ಅಂತಿಯಾ ಹೇಳಲು ಬಾಯಿನೇ ಬರುವದಿಲ್ಲ. ಹೀಗೆ ಅಂದಿನ ಕಾರ್ಯ ಕ್ರಮವನ್ನು ಮುಗಿಸಿಕೊಂಡು ಊರಿಗೆ ಹೋದರು.

೨೮

ನಂತರ ಒಂದೆರಡುದಿನದಲ್ಲಿ ಅವರನ್ನು ದಾವಣಗೆರೆಯಲ್ಲಿ ಕಂಡೆನು. ಈರ್ವರೂ ಸೇರಿ ಅಂದು ವಾಕಿಂಗ್ ಹೋಗಿಬಂದೆವು. ಮರಳಿ ಬರುವಾಗ ಮಳೆ ಬಂದಿತು ಈರ್ವರೂ ತೋಯಿಸಿಕೊಂಡೆವು. ಸಮೀಪ-ದಲ್ಲಿಯೇ ಇವರ ಲಾಜಿಂಗ್ ಇತ್ತು. ಅಲ್ಲಿಗೆ ಹೋಗಿ ಬಟ್ಟೆ ಬದಲಾಯಿ-ಸಬೇಕೆಂದು ಹೋದಾಗ, ನನ್ನನ್ನು ರೂಮಿನಲ್ಲಿ ಕೂಡ್ರಿಸಿ ಬಟ್ಟೆ ಹಿಂಡುತ್ತಿರು ಎಂದು ಹೇಳಿ, ಐದ್ಹತ್ತು ನಿಮಿಷದಲ್ಲಿ ಸೀರೆಯನ್ನು ತಂದರು. ನಾನು ಸೀರೆಯನ್ನು ಬದಲಾಯಿಸಿದ ನಂತರ ಅವರು ಒಳಗೆ ಬಂದು ಬಟ್ಟೆಗಳನ್ನು ಬದಲಾಯಿಸಿದರು. ಅವರ ಸದೃಡವಾದ ಬರಿಮೈಯನ್ನು ಕಂಡು ನನ್ನ ದೇಹವೆಲ್ಲ ಪುಲಕಿತಗೊಂಡಿತು. ನನ್ನ ಮನಸ್ಸು ಬೇರೊಂದು ವಿಚಾರದಲ್ಲಿತ್ತು. ಅಲ್ಲಿಯೇ ಊಟವನ್ನು ತರಿಸಿದರು. ನನ್ನ ಮನದ ಭಾವನೆ ಮಾತ್ರ ಅವರಿಂದ ಏನನ್ನೋ ಬಯಸುತ್ತಿತ್ತು. ಆದರೆ ಅವರು ಮಾತ್ರ ಬದಲಾಗಿರಲಿಲ್ಲವೆಂದು ಅವರ ಮುಖದ ಮೇಲಿಂದ ಗೊತ್ತಾಗುತ್ತಿತ್ತು. ಪದೇ ಪದೇ ಅವರನ್ನೇ ನೋಡುವ ಬಯಕೆಯಾಗುತ್ತಿತ್ತು. ಆದನ್ನರಿತ ಅವರು ನಡೀ ಭಾಗ್ಯ ರಾತ್ರಿಯಾಯ್ತು

ನಿನ್ನನ್ನು ಹಾಸ್ಟೆಲಿಗೆ ಬಿಟ್ಟುಬರುವೆನೆಂದು ಅನ್ನುತ್ತ, ರೂಮಿನ ಬೀಗನ್ನು ತೆಗೆದುಕೊಂಡರು. ಆಗ ಅನಿವಾರ್ಯವಾಗಿ ನಾನು ಏಳಲೇ ಬೇಕಾಯ್ತು. ರೂಮಿಗೆಬಂದು ನಾನೊಬ್ಬಳೇ ವಿಚಾರಿಸಿದಾಗ ನನಗೇನೇ ನಾಚಿಕೆ ಎನಿಸಿತು. ಮತ್ತೊಮ್ಮೆ ಅವರು ಬೆಟ್ಟಿಯಾದಾಗ ಅವರನ್ನು ಕ್ಷಮೆ ಕೇಳಿದೆ. ಅಂದಿನಿಂದ ಪ್ರಾರಂಭವಾದ ನಮ್ಮ ಪ್ರೇಮವು ಹೀಗೆಯೇ ಮುಂದುವರಿತಾಯಿದೆ ಎನ್ನಲು, ನೀನು ತುಂಬಾ ಅದೃಷ್ಟ-ವಂತೆ ಭಾಗ್ಯ, ರಾಮುನಂತಹ ಸದ್ಗುಣಿಗಳು ಈ ಜಗದಲ್ಲಿ ಬಹಳ ವಿರಳ. ಅದಷ್ಟು ಬೇಗನೇ ಊಟ ಹಾಕಿಸಿಬಿಡಿ ಎಂದು ಕಮಲಾ ನುಡಿಯಲು, ಇನ್ನು ಅದಕ್ಕೆ ಅಡೆತಡೆಗಳಿವೆ. ನಾನು ಮಧು ಒಂದು ದೇಹದ ಎರಡು ಭಾಗಗಳಿದ್ದಂತೆ ಇದ್ದೀವಿ. ಆಮೇಲೆ ಅವನು ಒಬ್ಬಂಟಿಗನಾಗುತ್ತಾನೆ ಎಂದು ರಾಮು ನುಡಿಯಲು, ಅವರಿಗೆ ಮುದ್ರಣಾಲಯವಿದೆಯಲ್ಲ, ಇಲ್ಲದಿದ್ದರೆ ಅವರಿಗೊಂದು ಅವರು ಮೆಚ್ಚು-ವಂತಹ ಹುಡುಗಿಯನ್ನು ತಂದು ಮದುವೆ ಮಾಡಿಬಿಡಿ, ಆಗ ದಾರಿ ಸುಲಭವಾಗ್ತದೆ ಎಂದು ಕಮಲಾ ನುಡಿಯಲು, "ಆ ಹುಡುಗಿ ನೀನೇ ಏಕಾಗಬಾರದು ಕಮಲಾ" ಎಂದು ಭಾಗ್ಯ ನುಡಿದಾಗ, ಕಮಲಳ ಮೈಯಲ್ಲಿ ಒಮ್ಮೆಲೆ ವಿದ್ಯುತ್ ಸಂಚಾರವಾದಂತಾಗಿ ಈರ್ವರ ಮುಖನನ್ನು ನೋಡಲು, ಮೈಯೆಲ್ಲವೂ ಬೆವರುವದು. ಯಾಕೆ ಕಮಲ ನಿನಗೆ ಮನಸ್ಸಿಲ್ಲವೆ ? ಎಂದು ಭಾಗ್ಯ ಕೇಳಿದಾಗ ಆ ಯೋಗ್ಯತೆ ನನಗಿದೆಯೇ ಎಂದು ಲೆಕ್ಕಹಾಕತಾಯಿದ್ದೇನೆ. ರಾಮು ನನ್ನ ಮನೆಯವರಿಂದ ಅವರಿಗಾದ ಅನ್ಯಾಯೇ ಅಷ್ಟಿಷ್ಟಲ್ಲ.

ಮೊನ್ನೆ ನಡೆದ ಘಟನೆಯು ಇನ್ನೂ ಅವರ ಮನದಿಂದ ದೂರ ಸರಿದಿಲ್ಲ. ಅವರಿಗಷ್ಟೇ ಏಕೆ ನಮ್ಮ ಮನದಿಂದಲೇ ಅಳಿಸಿ ಹೋಗಿಲ್ಲ. ಇಂಥಹ ಮನೆತನದವಳಾದ ನನ್ನನ್ನು ಬಯಸುವದು ಅಸಾಧ್ಯವಾದ ಮಾತು ಎಂದು ಕಮಲಾ ನುಡಿಯಲು, ಕಮಲಾ ಮಧುಕರನ ಹೃದಯ ಬಹಳ ವಿಶಾಲವಾದದ್ದು, ನೀನು ಈ ವಿಷಯ ವನ್ನು ಮನಸ್ಸಿನಲ್ಲಿಟ್ಟುಕೊಂಡೇ ಮುದ್ರಣಾಲಯಕ್ಕೆ ಬಂದಿಲ್ಲವೆಂದು

ತಿಳಿದುಕೊಂಡೇ, ನಿನ್ನೆ ಗೋಪಾಲನ ಸಂಗಡ ನಿಮ್ಮ ಮನೆಗೆ ಬಂದಿದ್ದ. ನಿನಗೆ ಸಮಾಧಾನ ಹೇಳಿ ಸತ್ಯದ ಹಾದಿಯಲ್ಲಿ ಮುನ್ನುಗ್ಗು-ವಾಗ ಧೈರ್ಯವಿರಬೇಕು. ತನ್ನ ಬಲದಲ್ಲಿಯೇ ತನಗೆ ಸಂಪೂರ್ಣ ನಂಬಿಗೆಯಿರಬೇಕು. ಕಷ್ಟಗಳಿಗೆ ಹೆದರದೆ ಸಾಗಬೇಕು ಎಂದು ಹೇಳಲು ಬಂದಿದ್ದ, ಆದರೆ ನೀನು ಭಾಗ್ಯ ಸಿನಿಮಾಕ್ಕೆ ಹೋಗಿದ್ದಿ-ರೆಂದು ತಿಳಿದು ನಿರಾಶೆಗೊಂಡು, ಇಂದು ವಿಮಲಳಿಗೆ ನಿನ್ನನ್ನು ಕರೆತರಲು ಹೇಳಿದ ಎಂದು ರಾಮು ನುಡಿಯಲು, ಹೌದೇ ನಮ್ಮ ಮನೆಯವರೆಗೂ ಬಂದಿದ್ರೆ! ಮನೆಯಲ್ಲಿ ಯಾರ್ಯಾರು ಇದ್ದರಂತೆ ಎನ್ನಲು, ನಿಮ್ಮ ತಂದೆ-ತಾಯಿ, ದೀಪಕ ಎಲ್ಲರೂ ಇದ್ದರಂತೆ ನಿಮ್ಮ ತಾಯಿಯವರ ಪ್ರೀತಿ ಆದರವನ್ನು ಬಹಳ ಹೊಗಳಿದ. ಆತನು ಮರಳಿ ಬರುವಾಗ ನಿಮ್ಮ ತಂದೆ ಮಧುಕರನಿಗೆ ಒಂದು ಸವಾಲನ್ನು ಹಾಕಿದರಂತೆ, ಅದನ್ನು ಅವನು ಹೇಳಲಿಲ್ಲ ಎಂದು ನುಡಿದು ನಡಿರಿ ಕತ್ತಲಾಯ್ತು ಎಂದು ನುಡಿದು ಮನೆಯ ಕಡೆಗೆ ಬಂದಿದ್ದರು.

## ೨೯

ಮಧುಕರನ ಹೃದಯದಲ್ಲಿ ಕಮಲಳಿಗೆ ಪವಿತ್ರವಾದ ಸ್ಥಾನವನ್ನು ನೀಡಿದ್ದ ಬಗ್ಗೆ, ಭಾಗ್ಯ ಕಮಲಳಿಗೆ ಪತ್ರವನ್ನು ಬರೆದು ತಿಳಿಸಿ-ದ್ದಳು. ಆತನನ್ನು ಬೆಟ್ಟಿಯಾಗಲು ಹೇಳಿ ಬರೆದಿದ್ದಳು. ಅದೇ ವಿಚಾರದಲ್ಲಿ ರಾತ್ರಿಯೆಲ್ಲ ನಿದ್ರೆಬಾರದೇ ಬೆಳಗಿನ ಜಾವದಲ್ಲಿ ನಿದ್ರೆ ಬಂದಿತ್ತು. ಅವಳು ಆಗ ಕನಸೊಂದನ್ನು ಕಂಡಳು. ಕಮಲಳ ಕರೆಗೆ ಓಗೊಟ್ಟು ಮಧುಕರ ಉದ್ಯಾನವನಕ್ಕೆ ಬರುವದಾಗಿ ಹೇಳಿದ್ದನು. ಈರ್ವರೂ ಸರಿಯಾದ ಸಮಯಕ್ಕೆ ಹಾಜರಾದರು. ಈರ್ವರ ಈ ಪ್ರಥಮ ಮಿಲನವು ಮನದಲ್ಲಿ ಏನೋ ಒಂದು ತರಹದ ಹೆದರಿಕೆ ಮಾತಾಡಲು ಕಾತರ, ಉದ್ವೇಗ ಮೂಡಿತು, ನಾಲ್ಕು ನಯನಗಳು

ಯಾರಿಗೂ ಅರ್ಥವಾಗದ ಭಾಷೆಯಲ್ಲಿ ಮಾತನಾಡಿದವು. ಈರ್ವರಿಗೂ ಸಂತೋಷದ ಕಾರಂಜಿ ಚಿಮ್ಮಿ ಹೊಮ್ಮಿತು. ಒಬ್ಬರಿಗೊಬ್ಬರು ಕೈಚಾಚಿ ಮೃದುವಾಗಿ ನೇವರಿಸಿಕೊಂಡರು. ಕಮಲಳ ಮನದಲ್ಲಿ ಆನಂದದ ಹೊಳೆ ಹರಿದಾಡಿ, ತುಂಬುಗಲ್ಲದ ಮೋಹಕತೆಯ ಸುಂದರ ಯುವಕ ಕೈಚಾಚಿ, ಬಾ ಕಮಲಾ ಅಲ್ಲಿ ಬಂಡಿಯ ಮೇಲೆ ಕೂಡೋಣ ಎನ್ನಲು ಈರ್ವರೂ ಹೆಜ್ಜೆಯನ್ನಿರಿಸಿದರು.

ಅವರ ಪಕ್ಕದಲ್ಲಿಯೇ ಯಾರ ಹೆದರಿಕೆಯೂ ಇಲ್ಲದೆ ತಮ್ಮದೇ ಆದ ಪ್ರೇಮ ಪ್ರಪಂಚದಲ್ಲಿ ಜೋಡಿ ಹಕ್ಕಿಗಳೆರಡು ಆಟವನ್ನು ಆಡುತ್ತಿದ್ದವು. ಈ ಜೋಡಿ ಹಕ್ಕಿಗಳ ಪ್ರೇಮದಾಟವನ್ನು ಕಂಡು ನಸುನಾಚಿ ರವಿಯು ಪ್ರೇಮಿಗಳಿಗೆ ತೊಂದರೆಯಾಗಬಾರದೆಂದು, ತನ್ನೆಲ್ಲ ಕಿರಣಗಳನ್ನು ತನ್ನೆಡೆಗೆ ಸಂಪೂರ್ಣ ಎಳೆದುಕೊಂಡನು. ತಂಪಾದ ಗಾಳಿಯು ಬೀಸಿ ಈ ಪ್ರೇಮಿಗಳಿಗೆ ,ಹುಮ್ಮಸ್ಸು ಬರುವ ಸಲುವಾ-ಗಿಯೇ ಮತ್ತಷ್ಟು ಹವೆಯು ತಂಪಾಯಿತು. ಈರ್ವರೂ ಹೋಗಿ ಕಲ್ಲಿನ ಮೇಲೆ ಕುಳಿತರು. ಆ ಪಕ್ಷಿಗಳು ಅಲ್ಲಿಯೂ ಬಂದು ಆಟವನ್ನು ಆಡತೊಡಗಿದವು. ಅವುಗಳನ್ನೇ ತದೇಕ ದೃಷ್ಟಿಯಿಂದ ನೋಡುತ್ತಲಿದ್ದ ಕಮಲಳ ಕೈಯನ್ನು ಮಧುಕರ ಮೃದುವಾಗಿ ಸವರಿದಾಗ, ಮನದಲ್ಲಿ ಏನೋ ಒಂದು ತರಹದ ಅನುಭವ, ಮಧುಕರನನ್ನು ತಬ್ಬಿ ಮುದ್ದಾಡ ಬೇಕೆಂದು ಮನಸ್ಸಿದ್ದರೂ ಧೈರ್ಯ ಬರಲಿಲ್ಲ. ಕಮಲಾ ಮಾನವ ಪಕ್ಷಿಗಳಷ್ಟು ಸ್ವತಂತ್ರನಲ್ಲ. ಮಾನವನಿಗೆ ಸಮಾಜದ, ಸಂಪ್ರದಾಯದ ಬ್ರಹ್ಮರಾಕ್ಷಸಶಕ್ತಿ ಬೆನ್ನುಹತ್ತಿರುತ್ತದೆ. ಅದನ್ನು ಎದುರಿಸುವಶಕ್ತಿ ನಮ್ಮಲ್ಲಿದ್ದರೆ ನಾವು ಕೂಡಾ ಆ ಪಕ್ಷಿಗಳಂತೆ ವಿಹರಿಸಬಹುದು ಅಲ್ಲವೆ ? ಹೌದು ಮಧು ಈ ಹಾಳು ಸಂಪ್ರದಾಯ ಇರದೇ ಇದ್ದರೆ ನಾವೂ ಕೂಡಾ ಮನಬಂದಂತೆ ಹಾರಾಡಬಹುದಿತ್ತು ಎಂದು ನಗುತ್ತ ನುಡಿಯಲು, ಅವಳ ಈ ನಗುಮೊಗವನ್ನು ಕಂಡ ಮಧು ಈ ಸುಂದರಿಯನ್ನು ಸೃಷ್ಟಿಸಿದ ಸೃಷ್ಟಿಗೆ ನಮನ ಹೇಳಿದ.

ಹಾಗೆಯೇ ಆತನ ಮನದಲ್ಲಿ ಬೇರೊಂದು ವಿಚಾರವು ಹೊಳೆ-

ಯಿತು. ಅದನ್ನು ಅಂತ ಕಮಲಾ ಯಾಕೆ ಮಧು ಒಂಥರ ಮುಖ ಮಾಡಿದಿರಿ ಎಂದು ಕಮಲಾ ಗಾಬರಿಯಿಂದ ಕೇಳಲು, ಯಾಕಿಲ್ಲ ಕಮಲಾ ನಮ್ಮ ಈ ಪ್ರೇಮದದಾರಿ ಅಷ್ಟೊಂದು ಸರಳವಾದುದಲ್ಲ. ನೀನು ನಿನ್ನ ಮನೆಯವರನ್ನೆಲ್ಲ ತೊರೆದುಬರಬೇಕು. ನನ್ನದು ಅಷ್ಟೊಂದು ಹೇಳಿಕೊಳ್ಳುವಂತಹ ಸಂಪಾದನೆಯಲ್ಲ. ಇದರಲ್ಲಿ ನಿನ್ನನ್ನು ಸುಖವಾಗಿ ಇಡಲಿಕ್ಕಾಗುವದಿಲ್ಲ. ಸರಿಯಾದ ಅಂತಸ್ತಿಲ್ಲದೆ ಪ್ರೀತಿ ಪ್ರೇಮಂತ ಹೋದರೆ ಹೃದಯಕ್ಕೆ ಸಾವಿರಾರು ಮುಳ್ಳುಗಳು ಚುಚ್ಚಿದ ಗಾಯಕ್ಕೆ ಹಿಂಸೆಗೆ ಗುರಿಯಾಗಿ ನರಳಬೇಕಾಗ್ತದೆ ಎಂದು ಮಧು ನುಡಿದಾಗ, ಸಾವಿರಾರು ಮುಳ್ಳುಗಳಿಂದ ಚುಚ್ಚಿದ ಗಾಯಕ್ಕೆ ಹಿಂಸೆಗೆ ಕೇವಲ ಒಂದು ಹೂವಿನಿಂದ ಮರೆತು ಹಾಯಾಗಿರಬಹುದು. ಹೂವು ಎಲ್ಲಿ ಬೆಳೆದರೇನು ಅದಕ್ಕೆ ಒಂದೇ ಹೆಸರು ಹೂವೆಂದು. ಅದು ತಿಪ್ಪೆ-ಯಲ್ಲಿ ಬೆಳೆಯಲಿ, ಉಪ್ಪರಿಗೆಯಲ್ಲಿ ಬೆಳೆಯಲಿ, ಯಾವ ಹೂವಾದರು ಸರಿ ದೇವರಿಗೆ ಮೀಸಲಲ್ಲವೆ, ಹೂವಿಗೂ ಪ್ರೀತಿಗೂ ತಾರತಮ್ಯ-ವೆಲ್ಲಿದೆ ಎಂದು ಕಮಲ ನುಡಿದಾಗ, ಹೌದು ಕಮಲ ನೀನು ಮನಸ್ಸು ಮಾಡಿದರೆ ಎಂಥೆಂಥಹ ಶ್ರೀಮಂತವರಗಳನ್ನು ನೀನು ಆರಿಸಬಹುದು, ನೀನೂ ಕೂಡ ಸುಖವಾಗಿರಬಹುದು. ನಿಮ್ಮ ಮನೆಯ ಜನರೆಲ್ಲರೂ ಸೇರಿ ಮಾಡಿದ ಮದುವೆಯಾಗುವದರಿಂದ ಎಲ್ಲರ ಪ್ರೀತಿಗೆ ಪಾತ್ರಳಾಗಬಹುದಿತ್ತು. ಅದೆಲ್ಲವನ್ನು ಬಿಟ್ಟು ಈ ಪರದೇಶಿಯ ಮೇಲೆ ಅಷ್ಟೇಕೆ ಒಲವು ಎಂದು ಮಧು ಕೇಳಿದಾಗ, ಒಲವಲ್ಲ ಮಧು ಪ್ರೀತಿ, ಪ್ರೇಮದ ಜೊತೆಗೆ ಅನುರಾಗದ ಆಸರೆ. ಒಲವಿಲ್ಲದ ಪ್ರೇಮ ಪ್ರೇಮವಿಲ್ಲದ ಮದುವೆ ಉಪ್ಪಿಲ್ಲದ ಊಟವಿದ್ದಂತೆ. ಎಲ್ಲವನ್ನೂ ಅರಿತವರಾದ ನೀವು ಹೀಗೇಕೆ ಪ್ರಶ್ನಿಸುವಿರಿ ಎನ್ನುತ್ತಿರುವಾಗಲೇ ಅವಳ ಕಣ್ಣಲ್ಲಿ ನೀರಿನ ಹನಿಗಳು ಉದುರಿದವು. ತಕ್ಷಣ ಮಧು ಅವಳ ಕಣ್ಣುಗಳನ್ನು ತನ್ನೆರಡು ಕೈಗಳಿಂದ ಒರೆಸುವನು. ಆಗ ಕಮಲ ಆತನ ಕೈಗಳನ್ನು ಹಿಡಿಯುತ್ತ, ದಯವಿಟ್ಟು ನನ್ನನ್ನು ನಿರಾಕರಿಸಬೇಡಿ. ಈ ಕೈಗಳ ಆಸರೆಯಿಲ್ಲದೆ ಬದುಕೋ ಶಕ್ತಿನನಗಿಲ್ಲ ಎಂದು ದೈನದಿಂದ ಕಮಲ ನುಡಿದಾಗ, ಮಧುಕರ ಅವಳ ಮುಖ-

ವನ್ನು ತನ್ನೆರೆಡು ಕೈಗಳಿಂದ ಹಿಡಿದು, ಕಮಲ ನಿನ್ನಲ್ಲಿರುವ ಸೌಂದರ್ಯಸಂಪತ್ತಾಗಲಿ ಸಿರಿತನದಸಂಪತ್ತಾಗಲಿ ನನ್ನಲ್ಲಿಲ್ಲ. ನಿನ್ನನ್ನು ಕೈಹಿಡಿಯುವ ಯೋಗ್ಯತೆ ನನಗಿದೆಯೇ ಎಂದು ನನ್ನ ಆತ್ಮಕ್ಕೆ ಪ್ರಶ್ನೆ ಹಾಕಿಕೊಂಡೆ ಎಂದು ಮಧು ನುಡಿದನು.

ನನಗೆ ಈ ಆಡಂಬರದ ಸಂಪತ್ತು ಬೇಕಾಗಿಲ್ಲ. ಅವೆಲ್ಲವುಗಿಂತ ಮಿಗಿಲಾದ ಪ್ರೀತಿಪ್ರೇಮ ಸಹನೆಗಳೆಂಬ ಹೃದಯ ಸಂಪತ್ತು ಬೇಕು. ಆ ಸಂಪತ್ತು ನಿಮ್ಮಲ್ಲಿದೆ ಎಂದು ಕಮಲಾ ನುಡಿದಾಗ, ಇವೆಲ್ಲ ಮೌಲ್ಯ ಕಳೆದುಕೊಂಡು ಮೂಲೆ ಸೇರಿದ ವಸ್ತುಗಳು ಕಮಲಾ, ಅವು ಯಾವವು ನಿನ್ನನ್ನು ಸಂತೋಷವಾಗಿ ಇಡುವದಿಲ್ಲ ಎನ್ನಲು, ಇಲ್ಲ ಅವುಗಳಿನ್ನೂ ತಮ್ಮ ಮೌಲ್ಯವನ್ನು ಕಳೆದುಕೊಂಡಿಲ್ಲ. ಜನರ ಮನಸ್ಸು ಹೀನಸ್ಥಿತಿಗೆ ಹೋಗಿ ಅದನ್ನು ದೂರಮಾಡಿದೆ, ನನಗೆ ಅಂಥಹ ಮಂತ್ರಗಳೇಬೇಕು. ಈ ಮಂತ್ರಗಳೇ ನನ್ನಮೇಲೆ ಶಾಶ್ವತ-ವಾಗಿದ್ದರೆ ಸಾಕು, ಬೇರೆ ನಾನೇನನ್ನೂ ಬಯಸಲಾರೆ ಎಂದು ಕಮಲಾ ನುಡಿಯಲು, ನಿನ್ನಿಷ್ಟ ಕಮಲ ನನ್ನಿಂದ ನೀನು ತೊಂದರೆಗೆ ಒಳಗಾಗಬಾರದೆಂದು ಇಷ್ಟೆಲ್ಲ ಹೇಳಬೇಕಾಯ್ತು. ನನ್ನ ಶಕ್ತಿಮೀರಿ ನಿನ್ನನ್ನು ಸುಖವಾಗಿಡಲು ಪ್ರಯತ್ನಪಡತೀನಿ ಹೀಗೆಲ್ಲ ಹೇಳಿದೆನೆಂದು ಬೇಜಾರಮಾಡಿಕೊಳ್ಳಬೇಡ ಎಂದು, ಅವಳೆರಡೂ ಕೈಗಳನ್ನು ಹಿಡಿಯಲು, ಇಲ್ಲ ಮಧು ಎನ್ನಲು ಕಮಲಳ ಕಣ್ಣಲ್ಲಿ ನೀರು ಬರಲು, ಮತ್ತೇಕೆ ಕಮಲಾ ಕಣ್ಣಲ್ಲಿನೀರು ಎಂದು ಮಧು ಕೇಳಿ ಅವಳ ಕಣ್ಣೀರನ್ನು ಒರೆಸುವನು. ಕಮಲ ಆತನ ಕೈಗಳನ್ನು ಹಿಡಿದು ಚುಂಬಿಸಿ ಕಣ್ಣೀರಲ್ಲ ಮಧು ಆನಂದಬಾಷ್ಪ ಎಂದು ಅಂದಾಗ, ಮಧುಕರ ಆಕೆಯ ಹಣೆಯನ್ನು ಚುಂಬಿಸಲು ಕಮಲ ಆತನನ್ನು ತಬ್ಬಿಕೊಳ್ಳುವಳು ಈರ್ವರೂ ಬಿಗಿಯಾದ ಅಪ್ಪುಗೆಯಲ್ಲಿ ಮೈಮರೆತಾಗ, ಪಕ್ಷಿಗಳ ಗುಂಪೊಂದು ಸದ್ದುಮಾಡುತ್ತ ಹೋದಾಗ, ಗಾಬರಿಯಿಂದ ಈರ್ವರೂ ಬೇರೆಯಾಗುವರು. ಹಾಲಿನಲ್ಲಿ ಜೇನುಬೆರೆತಂತೆ ಎರಡೂ ದೇಹಗಳು ಒಂದಾಗಿದ್ದವು. ಸಂಜೆಸಮಯದ ನಸುಗತ್ತಲಿನಲ್ಲಿ ಈರ್ವರಿಗೂ ಏನೋ

ಒಂದು ತರಹದ ಅನುಬವವನ್ನು ಪಡೆದಂತಾಗಿ ಈರ್ವರ ಮುಖಗಳು ನಾಚಿಕೊಂಡವು.

ಅಷ್ಟರಲ್ಲಿ ವಿಧ್ಯುತ್‌ದ್ದೀಪಗಳು ಬೆಳಗಿದವು. ರಂಗುರಂಗಿನ ವಿಧ್ಯುತ್ ದೀಪಗಳಿಂದ ಪೋಳಗಿರುವ ವನವನ್ನು ಕಂಡು, ಈರ್ವರ ನಯನಗಳು ಹರ್ಷದ ಚಿಲುಮೆಯಿಂದ ಹೃದಯುಗಳೆರಡೂ ತಮ್ಮ ಭಾರವನ್ನು ಇಳಿಸಿಕೊಂಡು ಅರಳಿದ ಹೂವಾಗಿದ್ದವು. ಬಾ ಕಮಲಾ ಆ ಕಡೆಗೆ ಹೋಗೋಣ ಎನ್ನಲು ಈರ್ವರೂ ಎದ್ದು ಹೊರಡುವರು ಕಮಲಾ ಈ ವನಕ್ಕೆ ನಾನು ಸಾಕಷ್ಟು ಸಲ ಬಂದಿರುವೆ ಇಷ್ಟೊಂದು ಸುಂದರವಾಗಿ ಇದೆಯೆಂಬುದನ್ನು ನಾನು ಗಮನಿಸಿರಲಿಲ್ಲ ಎಂದು ಮಧುಕರ ನುಡಿಯಲು, ಹೌದು ನನಗೂ ಕೂಡಾ ಹಾಗೇ ಅನ್ನಿಸ್ತಾಯಿದೆ. ಬಹುಶಃ ಈ ಸುಂದರಾಂಗ ನನ್ನ ಜೊತೆ ಇರುವದ-ರಿಂದ ನನಗೆ ಹಾಗೆ ಅನ್ನಿಸುತ್ತಿರಬಹುದು ಎಂದು ಕಮಲಾ ನುಡಿದರೆ, ಹಾಗಲ್ಲ ಈ ಸೌಂದರ್ಯರಾಣಿಯು ಈ ಬಡವನ ಸಂಗಡವಿದ್ದುದರಿಂದ ಹಾಗನ್ನಿಸಬಹುದೂಂತ ಕಾಣುತ್ತೆ ಎಂದು ಮಧುಕರ ನುಡಿದಾಗ, ಹಾಗಲ್ಲಾಂದ್ರೆ ಈ ಎರಡು ಪಕ್ಷಿಗಳು ತಮ್ಮದೇ ಆದ ಪ್ರೇಮ ಪ್ರಪಂಚದಲ್ಲಿ ತೇಲಾಡುತ್ತ, ಹಾರಾಡುತ್ತ, ಈ ವನಕ್ಕೆ ಬಂದಿದ್ದರಿಂದ ಎಂದು ಕಮಲ ಮಧುಕರನ ಎರಡೂ ಗಲ್ಲವನ್ನು ತನ್ನೆರಡು ಕೈಗಳಿಂದ ಹಿಡಿಯಲು, ಮಧುಕರ ನಿನ್ನ ಊಹೆ ಅಕ್ಷರಸಹ ನಿಜ ಕಮಲ ಎಂದು ಮಧುಕರ ಅವಳಿಗೆ ಮುತ್ತನ್ನು ಕೊಡಲು, ಕಮಲಾ ನಾಚಿ ಆತನನ್ನು ತಬ್ಬಿಕೊಳ್ಳುವಳು. ಅಷ್ಟರಲ್ಲಿ ಬಾಗಿಲು ಬಡಿದ ಸಪ್ಪಳಾಗಲು, ಎಚ್ಚರಗೊಂಡು ಗಡಿಬಿಡಿಯಿಂದ ಹೋಗಿ ಬಾಗಿಲನ್ನು ತೆಗೆಯುವಳು ಎದುರಿಗೆ ಗೋಪಾಲ ಇದ್ದುದರಿಂದ ನಾಚಿಕೊಂಡು ಮರಳಿ ಮಂಚಕ್ಕೆ ಹೋಗುವಳು. ಏನ ಕಮಲಾ ಇಷ್ಟೊತ್ತಿನವರೆಗೆ ನಿದ್ರೆಮಾಡುವದಾ ನೋಡು ಕಣ್ಣುಗಳು ನಿದ್ದೆಮಾಡಿ ಎಷ್ಟುಕೆಂಪಗಾಗಿವೆ. ಹೋಗಿ ಸ್ನಾನಮಾಡಹೋಗು ನನಗೆ ವೇಳೆಯಾಯ್ತು ಎಂದು ಹೊರಡುವನು. ಕಮಲಾ ತನ್ನ ಹಾಗೂ ಮಧುಕರನ ಪ್ರೇಮಪ್ರಸಂಗವನ್ನು ಮನದಲ್ಲೇ ನೆನೆಯುಸಿಕೊಂಡು ನಕ್ಕು ಸ್ನಾನಕ್ಕೆಂದು ಎದ್ದು ಹೋಗುವಳು.

ಮಧುಕರನ ಸೋದರಮಾವನ ಕೇಸಿನಲ್ಲಿ ದೀಪಕ ಹಾಗೂ ಕಾಮೇಶರ ಆದೇಶದ ಮೇರೆಗೆ ಹಳ್ಳಿಯಲ್ಲಿಯ ನಾಲ್ಕಾರು ಜನರು ಸೇರಿದ್ದರು. ಈ ಗುಂಪಿನ ಹಿಂದೆ ಸಹಾಯಕರಾಗಿ ರೇವಣ್ಣ, ಕುಮಾರ ಗೌಡ, ನಾಗನಗೌಡರು ಸ್ಥಳೀಯ ನಗರದವರಾದರೆ, ಪಕ್ಕದ ನಗರದ ಶ್ರೀಮಂತರೂ ಪಾಲ್ಗೊಂಡಿದ್ದರು. ಅವರನ್ನು ಬಂಧಿಸಲು ಯಾವದೇ ತರಹದ ಆಧಾರಗಳಿರಲಿಲ್ಲ. ಮಧುಕರನ ಮೇಲೆ ಬಹುದಿನಗಳಿಂದಲೂ ಸೇಡಿಗಾಗಿ ಬಯಸಿದ ಈ ಜನರು ಹೆಚ್ಚಾದಂತೆ ಹೋದಂತೆ ಮಧುಕರನ ಜನಪ್ರೀಯತೆ ಹೆಚ್ಚುತ್ತ ಹೋಯಿತು. ಈತನನ್ನು ಮೂಲೆ ಗುಂಪು ಮಾಡಬೇಕೆಂದು ಬಯಸಿ ಈತನ ಸೋದರಮಾವನನ್ನು ದುರ್ಮರಣಕ್ಕೆ ಈಡುಮಾಡಿದರು. ಆದರೂ ಹೆದರದೆ ಮಧುಕರ ತನ್ನ ಸ್ನೇಹಿತರ ಸಹಾಯದಿಂದ ಧೈರ್ಯಹೊಂದಿ ಮುಂದುವರೆದನು. ಮತ್ತೇ ತನ್ನ ಹರಿತವಾದ ಲೇಖನಗಳಿಂದ ಜನರನ್ನು ತನ್ನೆಡೆಗೆ ಸೆಳೆದನು. ಗೋಪಾಲನು ಕಾಮೇಶ, ದೀಪಕ ಹಾಗು ನಾಲ್ಕಾರು ಜನರನ್ನು ಈ ಕೇಶಿನಲ್ಲಿ ಬಂಧಿಸಿದ್ದನು. ನಗರದ ಪ್ರಮುಖರು ಅನೇಕ ರೀತಿಯಿಂದ ಗೋಪಾಲನಿಗೆ ಬುದ್ಧಿವಾದ ಹೇಳಿದರು. ಗೋಪಾಲ ನೀನು ನಿನ್ನ ಒಡಹುಟ್ಟಿದವನನ್ನು ಬಂದಿಸಿದ್ದಿಯಾ, ಆ ಹಳ್ಳಿಯವರು ಹೇಳಿದರೆಂದು ನೀನು ಅವರನ್ನು ನಂಬಿದಿಯಾ, ಆದರೆ ಆದೇ ನಂಬಿಗೆ ನಿನ್ನ ಒಡಹುಟ್ಟಿದವನ ಮೇಲೆ ಇಲ್ಲ ಎನ್ನಲು, ಗೌಡರೇ ಇದು ಒಂದು ನ್ಯಾಯಾಲಯ, ಅದರ ದೃಷ್ಟಿಯಲ್ಲಿ ಎಲ್ಲರೂ ಒಂದೇ. ನಾನು ನ್ಯಾಯ ಮತ್ತು ಅನ್ಯಾಯದ ದಾರವನ್ನು ಮಾತ್ರ ನೋಡುವೆನು. ಆ ದಾರವನ್ನು ಯಾರು ಹಿಡಿದಿದ್ದಾರೆಂಬುದನ್ನು ನಾನು ನೋಡುವದಿಲ್ಲ. ನೋಡಿದರೆ ಅಲ್ಲಿ ನ್ಯಾಯ ದೊರಕುವದಿಲ್ಲ, ನ್ಯಾಯದ ಮುಂದೆ ಯಾರಿದ್ದರೂ ನಾನವರಪರವಾಗಿ ಇರುವವನು.

ನ್ಯಾಯದ ಹಾದಿಯಲ್ಲಿ ಮುನ್ನಡೆಯುವಾಗ ತಂದೆ-ತಾಯಿ

ಬಂಧುಬಳಗ ಅವರೆಲ್ಲರನ್ನು ಹಿಮ್ಮೆಟ್ಟಿ ಮುಂದೆ ಸಾಗುವದೇ ಮನುಜ ಧರ್ಮ. ನ್ಯಾಯದೇವತೆಯ ಮುಂದೆ ಅವರೆಲ್ಲರೂ ತೃಣಸಮಾನರು ಎಂದು ಗೋಪಾಲ ನುಡಿದಾಗ, ಗೋಪಾಲ ನೀನಿನ್ನು ಈ ವಿಷಯ ದಲ್ಲಿ ಹಸುಗೂಸು. ನಿನ್ನ ಹೆಸರು ಈಗ ಉನ್ನತಮಟ್ಟದಲ್ಲಿದೆ. ನಮ್ಮ ಎದುರು ಹಾಕಿಕೊಂಡು ನಿನ್ನ ಮರ್ಯಾದೇನ ಧೂಳಿಪಟ ಮಾಡಿಕೊಳ್ಳಬೇಡ. ಇಂದು ಒಳಗಿದ್ದವರು ನಾಳೇನೇ ಹೊರಗೆ ಬರುವರು. ನಾವು ಮನಸ್ಸು ಮಾಡಿದರೆ ಭೂಮಿಯನ್ನೇ ಬುಡಮೇಲು ಮಾಡುವಶಕ್ತಿ ನಮ್ಮಲ್ಲಿದೆ ಎಂದು ಕುಮಾರಗೌಡರು ಹೇಳಿದಾಗ, ರೀ, ಕುಮಾರಗೌಡರೇ ನೀವು ಯಾರ ಮುಂದೆ ನಿಂತು ಮಾತನಾ- ಡುತ್ತಿದ್ದೀರಿ ಎಂಬುದು ಎಚ್ಚರವಿರಲಿ. ಹಣದ ಮದದಿಂದ ಭೂಮಿ- ಯನ್ನೇ ಬುಡಮೇಲುಮಾಡಿ ಕಾನೂನುಗಳನ್ನು ನಿಮ್ಮ ಮನಬಂದಂತೆ ತಿದ್ದಿಕೊಂಡು ಮೆರದ ಕಾಲಹೊಯ್ತು. ಏನಿದ್ದರೂ ನ್ಯಾಯ ದೇವತೆಗೆ ಬೆಲೆ ಎಂಬುದನ್ನು ಮರೆಯಬೇಡಿರಿ. ಈ ಕೇಸಿನಲ್ಲಿ ಆರು ಜನರಲ್ಲ ಇನ್ನೂ ಆರುಜನರಿದ್ದಾರೆ. ಒಂದು ವಾರದಲ್ಲಿ ಅವರನ್ನೂ ಒದ್ದು ಲಾಕಪ್ಪಿನಲ್ಲಿ ಹಾಕತೀನಿ ಎಂದು ಗೋಪಾಲ ಕೋಪದಿಂದ ನುಡಿಯಲು, ಅಷ್ಟೊಂದು ರೇಗುವದು ಸರಿಯಲ್ಲ ಗೋಪಾಲ, ನಮಗೂ ಕೋಪ ಬರುತ್ತೆ, ಇಲ್ಲಿ ಕೇಳು, ಒಂದು ವಾರದಲ್ಲ ಇನ್ನೂ ಆರುಜನರನ್ನು ಲಾಕಪ್ಪಿನಲ್ಲಿ ಹಾಕತೀಯಾ, ಮೊದಲು ನೀನು ಆ ನಿನ್ನ ಕುರ್ಚಿ ಭದ್ರವಾಗಿ ನೋಡಿಕೋ ಎಂದು ಹೇಳಿ ಹೊರಡು- ವನು. ಮೊದಲು ಹೊರಡು ನೀಚಾ ಇಲ್ಲಿಂದ ಎಂದು ಗೋಪಾಲ ಕುರ್ಚಿಯಿಂದ ಮೇಲೇಳಲು ಗೌಡರು ಹೊರಗೆ ಹೋಗುವರು.

ಅಷ್ಟರಲ್ಲಿ ಮಂತ್ರಿಗಳಿಂದ ಫೋನು ಬರುವದು ಮಂತ್ರಿಗಳು ಆರುಜನರನ್ನು ಬಿಡಲು ಹೇಳಿದಾಗ, ನಿಮ್ಮಂಥಹ ನೀಚರು ಮಂತ್ರಿ ಪದವಿಯನ್ನು ಪಡೆದಿದ್ದಕ್ಕಾಗಿಯೇ ನಮ್ಮ ದೇಶದ ಕಾನೂನುಗಳು ಮೂಲೆಗುಂಪಾಗಿವೆ. ನ್ಯಾಯದೇವತೆಯ ಕೊಲೆಯನ್ನು ಮಾಡಲು ಹೇಳುವಿರಾ, ಇದೇ ತರಹ ಫೋನು ಮತ್ತೊಂದಾದರೂ ಮಾಡಿದರೆ ನಿಮ್ಮ ಮೇಲೆ ಕ್ರಮ ಕೈಕೊಳ್ಳಬೇಕಾಗುವದು ಎಂದು ನುಡಿದು

ಫೋನನ್ನು ಇಡುವನು. ಮಂತ್ರಿಗಳಿಗೆ ಈ ರೀತಿ ಯಾರೂ ಮಾತನಾಡಿ-ರಲಿಲ್ಲ. ಈತನಿಂದ ನಾನು ಅವಮಾನವಾಗುತ್ತಿರುವದು ಎರಡನೆಯ ಸಲವೆಂದು ತಿಳಿದು ಆತನ ಮೇಲಾಧಿಕಾರಿಗಳಿಗೆ ಫೋನುಮಾಡಿದನು. ಅವರೂ ಕೂಡಾ ಆತ ಬಲು ನಿಷ್ಟುರನಾದಿ ಅಷ್ಟೇ ಧೈರ್ಯಶಾಲಿ ಆತನ ತಂಟೆಗೆ ನಾ ಹೋಗುವದಿಲ್ಲ ಎಂದು ಅಧಿಕಾರಿಗಳು ಹೇಳಿದಾಗ, ಮಂತ್ರಿಗಳು ಒಂದು ವಿಚಾರವನ್ನು ಹೇಳಿದಾಗ ಅವರು ಒಪ್ಪುವರು.

ನಂತರ ಗೋಪಾಲನು ತನ್ನ ಮೇಲಿನ ಅಧಿಕಾರಿಗಳಿಗೆ ಎಲ್ಲ ವಿಷಯವನ್ನು ಹೇಳಿದಾಗ, ಅವರೆಲ್ಲರನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಲು ಹೇಳಿದರು. ಅದರಂತೆ ಅವರೆಲ್ಲರನ್ನು ಹಾಜರು ಪಡಿಸಲು ದೀಪಕ ಕಾಮೇಶರನ್ನು ರೇವಣ್ಣ ಜಾಮೀನಿನ ಮೇಲೆ ಬಿಡಿಸಿ ಕೊಂಡು ಹೋದರು. ನಂತರ ಉಳಿದ ಜನರನ್ನು ಬೇರೆಯವರು ಬಿಡಿಸಿಕೊಂಡು ಹೋದರು. ಅವರೆಲ್ಲರೂ ವಾರಕ್ಕೊಂದು ಸಲ ಬಂದು ನ್ಯಾಯಾಲಯಕ್ಕೆ ಹಾಜರಾಗಬೇಕೆಂದು ನ್ಯಾಯಾಲಯ ಹೇಳಿತ್ತು.

ಈವಿಷಯವನ್ನು ಹೊಂಬೆಳಕಿನಲ್ಲಿ ಮಧುಕರ ಹೊಗಳಿ ಬರೆದಿದ್ದನಲ್ಲದೆ ಗೋಪಾಲನ ನಿಷ್ಟೆಯನ್ನು ಕೊಂಡಾಡಿದ್ದನು. ನಗರದ ನಾಗರಿಕರು ಗೋಪಾಲನ ಈ ಕರ್ತವ್ಯ ಪಾಲನೆಯನ್ನು ಬಹಳ ಮೆಚ್ಚಿದರು, ಆದರೆ ಗೋಪಾಲನ ಮನೆಯಲ್ಲಿ ಮಾತ್ರ ಹಾಹಾಕಾರವು ತುಂಬಿ ಹರಿದಾಡಿತು. ನಾಗನಗೌಡರು ಮಾತ್ರ ಚಕಾರಶಬ್ಧವನ್ನು ಎತ್ತಿರಲಿಲ್ಲ. ಗೋಪಾಲನ ತಾಯಿ ಶಾಂತಮ್ಮ ಮಾತ್ರ ಊಟನಿದ್ರೆಯಿಲ್ಲದೆ ಹಾಸಿಗೆ ಹಿಡಿದರು. ಮನೆತನದ ಮರ್ಯಾದೆ ಸಿಖರಕ್ಕೇರಿದ ವಿಷಯ ಒಂದು ಕಡೆಗಾದರೆ, ಹಾಳಾದ್ದು ಇನ್ನೊಂದೆಡೆಯಾಗಿತ್ತು. ಗೋಪಾಲ ಹಾಗೂ ಕಮಲಾ ಈರ್ವರೂ ಸೇರಿ ತಾಯಿಗೆ ಸಮಾದಾನವನ್ನು ಹೇಳಿ ಊಟ ಮಾಡಿಸುತ್ತಿದ್ದರು. ಕಮಲಾ ಮಾತ್ರ ತಾಯಿಯನ್ನು ಅಗಲಿ ಎಲ್ಲಿಗೂ ಹೋಗುತ್ತಿರಲಿಲ್ಲ.

ಹೀಗೆಯೆ ಒಂದೆರಡು ವಾರ ಕಳೆದಿರುವಾಗ, ನಗರದ ವಾತಾವರಣವು ಶಾಂತತೆಯತ್ತ ಸಾಗುತ್ತಿರುವಷ್ಟರಲ್ಲಿ, ಜನರೆಲ್ಲ ಹಳೆಯ

ಕಹಿನೆನಪನ್ನು ಮರೆತು ಹಾಯಾಗಿರುವಷ್ಟರಲ್ಲಿ ಗೋಪಾಲನಿಗೆ ವರ್ಗವಾದ ಪತ್ರವೊಂದು ಬಂದಿತು. ಅದನ್ನು ಓದಿದಾಗ ಹೃದಯ ಭಾರವಾಯಿತು. ನ್ಯಾಯದಿಂದ ನಡೆದ ನನಗೆ ಈ ಶಿಕ್ಷೆಯೇ? ನಾನು ನ್ಯಾಯವಾಗಿ ನಡೆದದ್ದು ತಪ್ಪೇ? ಎಂದು ವಿಚಾರದಲ್ಲಿ ಮಗ್ನನಾಗಿರುವಾಗ ಪೋಲೀಸಧಿಕಾರಿಗಳಿಗೆ ನಮಸ್ಕಾರ, ನೋಡಿದಿರಾ ಅಧಿಕಾರಿಗಳೇ, ನ್ಯಾಯ ನ್ಯಾಯವೆಂದು ಸಾಯುವಂಥವರು ಬದುಕುವ ಕಾಲವಿದಲ್ಲ. ಆದರೂ ನೀವು ಅಪರಾಧಿಗಳು, ಹೇಗೆಂದರೆ ಒಂದು ವಾರದಲ್ಲಿ ಮೂವತ್ತಾರು ಜನರನ್ನು ಬಂಧಿಸುವದಾಗಿ ಹೇಳಿದ್ರೀ ಅದು ನಿಮ್ಮಿಂದ ಸಾಧ್ಯವಾಗಲಿಲ್ಲ. ನೀವು ನಿಮ್ಮ ಮಾತನ್ನು ಉಳಿಸಿಕೊಂಡಿಲ್ಲ. ನೀವು ಈ ಜಾಗದಲ್ಲಿ ಕೂಡ್ರಲು ಯೋಗ್ಯವಿಲ್ಲ. ಅದಕ್ಕಾಗಿಯೇ ನಿಮಗಿಂದು ಬದಲಾವಣೆಯ ಪತ್ರವನ್ನು ಕಳಿಸಿರುವೆವು. ಇಂದು ಒಳಗಿದ್ದವರು ನಾಳೆ ಹೊರಗೆ ಇರುವರೆಂದು ಹೇಳಿದ್ದೆ ನಿಮಗದು ನೆನಪಿರಬಹುದು, ಅವನ್ನು ನಾವು ಮಾಡಿತೋರಿಸಿದ್ದೇವೆ. ಬೇಕಾದರೆ ನಿಮ್ಮ ಮೇಲಾಧಿಕಾರಿಗಳನ್ನು ವಿಚಾರಮಾಡಬಹುದು ಎಂದು ಕುಮಾರ ಗೌಡರು ಹೇಳಿದಾಗ, ನಿಮ್ಮಂತಹ ನೀಚರಿಗೆ ನ್ಯಾಯಾಲಯದ ತೀರ್ಮಾನ ಸರಿಬರಲಾರದು "ದಂಡಂ ದಶಗುಣಂ" ಎಂಬಂತೆ ನಿಮ್ಮಂಥ ನೀಚರಿಗೆ ಜನರೇ ತೀರ್ಪನ್ನು ಕೊಡಬೇಕು. ಆ ಕಾಲ ಬಲು ಹತ್ತಿರಾನೇ ಇದೆ ಎಂಬುದನ್ನು ಮರೆಯಬೇಡ ಎಂದು ಹೇಳಿ ಪೋನನ್ನು ಕೆಳಗಿಡುವನು. ನಂತರ ತನ್ನ ಮೇಲಾಧಿಕಾರಿಯನ್ನು ವಿಚಾರಿಸಿ ತನ್ನ ರಾಜಿನಾಮೆಪತ್ರವನ್ನು ತನ್ನ ಕೆಳಗಿನ ಅಧಿಕಾರಿಯ ಕೈಯಲ್ಲಿ ಕೊಟ್ಟು ಹೊರಬರುವನು.

## ೩೧

ಗೋಪಾಲ ನೇರವಾಗಿ ಮುಖಕರನ ಹತ್ತಿರ ಬರುವನು. ಅಲ್ಲಿ ತನ್ನ ಕೇಸಿನ ಬಗ್ಗೆ ನಡೆದ ಎಲ್ಲವಿಷಯವನ್ನು ಹೇಳುವನು. ಅಲ್ಲದೆ ನಾನು ಬಂಧಿಸಿದ ಆರು ಜನರು ನಿರಪರಾಧಿಗಳು ಆಗುವರು.

ಅವರೆಲ್ಲರೂ ಬುದ್ಧಿಹೀನರೆಂದು ವೈದ್ಯರಿಂದ ಪ್ರಮಾಣಪತ್ರವನ್ನು ಸುಮಾರು ಒಂದು ವರ್ಷದ ಹಿಂದೆಯೇ ಪಡೆದಿರುವರೆಂದೂ, ಅದನ್ನು ಇಂದು ನ್ಯಾಯಾಲಯಕ್ಕೆ ಹಾಜರು ಪಡಿಸಿರುವನು ಎಂದು ಗೋಪಾಲ ಹೇಳಿದಾಗ, ನೀವು ರಾಜಿನಾಮೆಯನ್ನು ಕೊಡಬಾರದಿತ್ತು ನಿಮ್ಮಂಥಹ ನ್ಯಾಯವಾದಿಗಳು ಆದೇ ತರಹದ ನಿರ್ಣಯವನ್ನು ತೆಗೆದುಕೊಂಡು ಹೊರಬಂದರೆ ಅಲ್ಲಿ ನ್ಯಾಯದೇವತೆಗೆ ಸ್ಥಳವೇ ಇಲ್ಲದಂತೆ ಆಗುವದು. ಎಂದು ಮಧುಕರ ನುಡಿದಾಗ, ನ್ಯಾಯದೇವತೆಗೆ ಯಾವತ್ತಿಗೂ ಜಯವಿದ್ದೇ ಇದೆ. ನಾನು ಅದನ್ನು ನನ್ನ ನಗರದಲ್ಲಿ ಕಾಣ-ಬಯಸುವೇನು. "ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕೆಂಬ" ಉದ್ದೇಶ ದಿಂದ ನಾನಿಂದು ಹೊರಗೆ ಬಂದಿರುವೆನು ನಾನು ಕೂಡಾ ನಿಮ್ಮ ಸಂಗಡ ದುಡಿಯುವೆನು. ಅವರನ್ನು ಬಗ್ಗುಬಡಿಯದೇ ನನ್ನ ಮನಸ್ಸಿಗೆ ಶಾಂತಿಯಿಲ್ಲವೆಂದು ಹೇಳಿ ಅಲ್ಲಿಂದ ನೇರವಾಗಿ ಕುಮಾರಗೌಡರ ಮನೆಗೆ ಹೋಗುವನು.

ಕುಮಾರಗೌಡರು ಮನೆಯ ಮುಂದಿನ ವರಾಂಡದಲ್ಲಿ ಪೇಪರನ್ನು ಓದುತ್ತ ಕುಳಿತಿದ್ದರು. ಗೋಪಾಲ ಹೋದವನೇ ಏನು ಕುಮಾರಗೌಡ ಪೇಪರ್ ಓದುತ್ತಾಯಿದ್ದಿಯಾ ಏನಿದೆ ಪೇಪರ್ದಲ್ಲಿ ವಿಶೇಷ ಎಂದು ಪೇಪರನ್ನು ಕಸಿದುಕೊಳ್ಳುವನು. ಈತನ ವರ್ತನೆ ಹಾಗೂ ಮಾತನ್ನು ಕೇಳಿ ಗಾಬರಿಯಿಂದ ಏನ ಗೋಪಾಲ ಈಕಡೆಬಂದೆ ಎನ್ನಲು, ಏನಿಲ್ಲ ಗೌಡರೇ ಈಗ ಫೋನ್ ಮಾಡಿದ್ರಲ್ಲ ಅದರ ವಿಚಾರವಾಗಿ ಮಾತಾಡಲು ಬಂದೆ ಎಂದು ಹಲ್ಲುಕಡಿಯುತ್ತ ನುಡಿದಾಗ, ಯಾರ ಫೋನು, ಯಾವಾಗ ಬಂತು, ಎಂದು ಮಾತನ್ನು ಬದಲಿಸಲು ಪ್ರಯತ್ನ ಪಡುವರು. ಆಗ ಗೋಪಾಲ ಎಲಾ ಕಥಿಮ ನಿನ್ನ ಬುದ್ಧಿವಂತಿಕೆನ ತೋರಿಸ್ತಿಯಾ ಎಂದು ಎಡಗೈಯಿಂದ ಆತನ ಎದೆಯ ಮೇಲಿನ ಅಂಗಿಯನ್ನು ಹಿಡಿದು, ಮುಖಕ್ಕೆ ಬಲಗೈಯಿಂದ ಗುದ್ದುವನು. ಹೊಡೆತ ತಾಳಲಾರದೇ ಚೀರುವನು, ಅದನ್ನು ಕೇಳಿ ಒಂದೆರಡು ಆಳುಗಳು ಗೌಡರ ಸಹಾಯಕ್ಕೆ ಬರುವರು. ಆಗ ಗೋಪಾಲ ಏ ಎಂದು ಕ್ರೋಧದಿಂದ ನುಡಿಯಲು ಅವರನ್ನು ನೋಡಿ

ಗೌಡರ ಅವಸ್ಥೆಯಂತೆ ನಮಗಾಗುವದು ಬೇಡವೆಂದು ವಿಚಾರಿಸಿ ಹಿಂಜರಿದರು. ಗೌಡರೇ ಇದು ನಮ್ಮ ನಿಮ್ಮ ಪ್ರಥಮ ಮಿಲನ ಬರೀ ಕ್ಷೇಮ ಸಮಾಚಾರವನ್ನಷ್ಟೇ ವಿಚಾರಿಸಿದ್ದೇನೆ. ಈ ಸಿಂಹದ ಮರಿ ಸಂಗಡ ಆಟವಾಡುವ ಇಚ್ಛೆ ನಿಮಗಿದ್ದರೆ ಮುಂದುವರೆಯಿರಿ. ಮತ್ತೊಮ್ಮೆ ಬೆಟ್ಟಿಯಾಗತೀನಿ ಎಂದು ಹೇಳಿ ಮತ್ತೊಂದು ಕೈಯಿಂದ ಮುಖಕ್ಕೆ ಹೊಡೆದು ಹೋಗುವನು. ನಗರದಲ್ಲಿ ಗೌಡರಿಗೆ ಯಾರೂ ಹೊಡೆದಿರಲಿಲ್ಲ. ಆದರಲ್ಲಿಯೂ ಇಂಥಹ ಬಲವಾದ ಹೊಡೆತಗಳನ್ನು ಗೌಡರು ಎಂದೂ ತಿಂದಿರಲಿಲ್ಲ. ಅವರು ಅನೇಕರಿಗೆ ಹೊಡೆತಗಳನ್ನು ನೀಡಿದ್ದರು. ಈಗ ಗೌಡರಿಗೆ ತಮ್ಮ ಗತಜೀವನದ ನೆನಪುಗಳೆಲ್ಲಾ ಒಂದೊಂದಾಗಿ ಮನದಲ್ಲಿ ಮೂಡಿ ಬಂದವು. ಅಷ್ಟರಲ್ಲಿ ವೈದ್ಯರನ್ನು ಕರೆದುಕೊಂಡು ಬಂದಿದ್ದರು.

ಅಲ್ಲಿಂದ ನೇರವಾಗಿ ಕರೀಮುಖಾನರ ಮನೆಗೆ ಹೋದನು. ಮನೆಯಲ್ಲಿ ಸಾಹೇಬರು ಹೆಂಡತಿಯ ಸಂಗಡ ಮಾತನಾಡುತ್ತ ಕುಳಿತಿದ್ದರು. ಗೋಪಾಲ ಬರುವನನ್ನು ದೂರದಿಂದಲೇ ನೋಡಿದ ಸಾಹೇಬರು ವರ್ಗವಾದ ವಿಷಯದ ಬಗ್ಗೆ ಮಾತನಾಡಲು ಬಂದಿರಬೇಕು. ಸರಿಯಾಗಿ ತರಾಟೆಗೆ ತೆಗೆದುಕೊಳ್ಳಬೇಕೆಂದು ವಿಚಾರದಲ್ಲಿ-ರುವಾಗ, ಅವನು ಬಾಗಿಲ ಹತ್ತಿರಬಂದು ಬಾಗಿಲನ್ನು ದಡರಾನೇ ನೂಕಿದಾಗ, ಆತನ ಹೆಂಡತಿ ಒಳಗೆ ಹೋಗುವಳು. ಆತನ ವರ್ತನೆಯನ್ನು ಕಂಡ ಸಾಹೇಬರು ಗಾಬರಿಯಾದರು. ಗೋಪಾಲ ಬಂದವನೇ ಪಕ್ಕದ ಕುರ್ಚಿಯೊಂದನ್ನು ಎಳೆದುಕೊಂಡು ಕೂಡ್ರುವನು. ಆಗ ಸಾಹೇಬರು ಈತನನ್ನೇ ನೋಡುತ್ತಿರಲು, ಏನು ಕರೀಮುಖಾನ ನನ್ನನ್ನ ನುಂಗುವ ಹಾಗೆ ಒಂದೇ ಸವನೇ ನೋಡುತಾಯಿದ್ದೀರಿ ಎಂದಾಗ, ನೀವೇನೊ ಹಳಬರು ಆದರೆ ನಿಮ್ಮ ಈ ವರ್ತನೆ ಎಂದು ಉಗುಳು ನುಂಗುತ್ತ ನುಡಿಯಲು, ಹೌದು ಬಹಳ ವಿಚಿತ್ರ ಅನಿಸ್ತಾಯಿದೆಯಲ್ಲ ಇನ್ನು ಮೇಲೆ ಹೀಗೆನೇ. ಅಂದು ನೀವು ಪೋನಿನಲ್ಲಿ ಏನು ಹೇಳಿದ್ರಿ ಇಂದಿನ ಸಮಾಜದಲ್ಲಿ ಉನ್ನತಮಟ್ಟವನ್ನು ಹೊಂದ

ಬೇಕಾದರೆ ನನ್ನ ಹತ್ತಿರ ಪಾಠಕ್ಕೆ ಬಾಯೆಂದು ಹೇಳಿದ್ರಲ್ಲಾ, ಅದಕ್ಕೆ ಬಂದಿದ್ದೇನೆ ಎಂದು ಗೋಪಾಲ ಹಲ್ಲುಕಡಿಯುತ್ತ ನುಡಿದಾಗ, ನಾನು ಹಾಗೆಲ್ಲ ಎಲ್ಲಿ ಹೇಳಿದ್ದೇ ಆದು ನಿಮ್ಮಂಥವರಿಗೆ! ಬೇರೆ ಯಾರಾದರೂ ಹೇಳಿರಬಹುದು. ಎಂದು ಸಾಹೇಬರು ನುಡಿದಾಗ, ಎಲಾ ಕಧೀಮ ಸಾಬ ಆಗಲೇ ಮಾತನ್ನು ತಿರುಗಿಸಿ ಬಿಟ್ಟೆಡಿಯಾ, ನಿಮ್ಮಂಥ ವರಿಂದ ನಾನು ಪಾಠ ಕಲಿಯಬೇಕಾಗಿಲ್ಲ. ಕಲಿಸಬೇಕಾಗಿದೆ. ನಗರದಲ್ಲಿ ನಿಮ್ಮಂಥ ಕೊಬ್ಬಿದ ಹಂದಿಗಳು ಬಹಳೇ ಇವೆ. ಅವುಗಳ ಗುಂಡ ಬಂಡಾಡಿ ಅವುಗಳ ವಂಶವೇ ಉಳಿಯದಂತೆ ಮಾಡಬೇಕಾಗಿದೆ ಎಂದು ನುಡಿದು, ಆತನ ಮುಖಕ್ಕೆ ಬಲವಾಗಿ ತನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ ಗುದ್ದುವನು. ನಿಮ್ಮೆಲ್ಲರ ಸದ್ದನ್ನು ಅಡಗಿಸಲು ನಾನಿಂದು ರಾಜಿನಾಮೆ ಕೊಟ್ಟು ಬಂದಿದಿನಿ. ಏನಿದ್ದರೂ ನನ್ನ ನಿನ್ನ ವ್ಯವಹಾರ ಜನರ ಮಧ್ಯೆ, ನಿಮ್ಮಂಥವರಿಗೆ ಈ ನಗರದಲ್ಲಿ ಇಂದಿನಿಂದ ಅವಸಾನ ಪ್ರಾರಂಭವಾಯ್ತು ಎಂಬುದು ನೆನಪಿರಲಿ, ಎಂದು ಮತ್ತೊಂದು ಗುದ್ದಿ ಹೊರಗೆ ಬರುವನು. ಆನಂತರ ಕರೀಮುಖಾನ್‌ರ ಹೆಂಡತಿ ಓಡಿ ಬಂದು ಪತಿಯ ಬಾಯಲ್ಲಿ ರಕ್ತವು ಬರುವದನ್ನು ಕಂಡು ಗಾಬರಿ ಯಿಂದ ಫೋನಿನ ಹತ್ತಿರ ಹೋದಳು.

೩೨

ಗೋಪಾಲನ ರಾಜಿನಾಮೆಯನ್ನು ಕೇಳಿದ ನಾಗನಗೌಡರು ಬಹಳೇ ನಿರಾಶರಾದರು. ತಮ್ಮೆಲ್ಲರ ಮೇಲಿರುವ ಕೇಸನ್ನು ಆತನೇ ನಡೆಸ ಬೇಕಾಗಿತ್ತು. ಈ ಕೇಶಿನಲ್ಲಿ ಗೋಪಾಲನಿಗೆ ಅವಮಾನವಾಗಿ ಆತನ ಪ್ರತಿಷ್ಠೆ ತಗ್ಗಿ ಹೋಗುತ್ತಿತ್ತು. ಈ ಗೋಪಾಲನ ರಾಜಿನಾಮೆಯನ್ನು ಕೇಳಿ ಆತನ ಸ್ವಾಭಿಮಾನಕ್ಕೆ ಎಲ್ಲರೂ ತಲೆದೂಗಿದರು. ಕುಮಾರಗೌಡ ಹಾಗೂ ಕರೀಮುಖಾನ್ರ ಮೇಲೆ ನಡೆದ ಈ ಹಲ್ಲೆಕುರಿತು ಚರ್ಚಿಸಿ ಬಹಳ ಗಾಬರಿಗೊಂಡರು, ನಂತರ ನಾಗನಗೌಡರು ನಿನ್ನ ಖರ್ಚಿನ

ವಿಷಯದಲ್ಲಿ ನಮ್ಮನ್ನು ಏನೂ ಕೇಳಬೇಡ. ಹಣದಬೆಲೆ ನಿನಗೆ ಗೊತ್ತಿದ್ದರೆ ಈ ನೌಕರಿಯನ್ನು ಬಿಟ್ಟುಬರುತ್ತಿರಲಿಲ್ಲ. ಎಂದು ಗೌಡರು ನುಡಿದಾಗ, ನೀವು ನನಗೆ ದಾನವಾಗಿ ಏನನ್ನೂ ಕೊಡಬೇಡಿ, ನಮ್ಮ ಆಸ್ತಿಯಲ್ಲಿ ನಾಲ್ಕುಭಾಗವಾಗಬೇಕು. ಆದರಲ್ಲಿ ಒಂದನ್ನು ನನಗೆ ಕೊಟ್ಟರೆ ಸಾಕು ಎಂದು ಗೋಪಾಲ ಕೇಳಲು, ಈ ಆಸ್ತಿಯನ್ನು ನಾನು ಗಳಿಸಿದ್ದು, ನಾನು ಸಾಯುವವರೆಗೆ ಯಾರಿಗೂ ಕೊಡುವದಿಲ್ಲ. ನಾನು ಸಾಯುವಾಗ ಯಾವದಾದರೂ ಮಠಕ್ಕೆ ದಾನಮಾಡುವೆನೆಂದು ಗೌಡರು ಹೇಳಲು, ಈ ನಿಮ್ಮ ವಿವಾದವು ಮೂರ್ಖತನದ ಪರಮಾವಧಿಯನ್ನು ತೋರಿಸುತ್ತದೆ. ತಂದೆಯ ಆಸ್ತಿಯನ್ನು ಸ್ವತಃ ತಂದೆಯೇ ಮಾರುವಂತಿಲ್ಲ, ಇನ್ನು ದಾನಧರ್ಮ ಮಾಡುವದಂತೂ ದೂರವಿರಲಿ ಎಂದು ಗೋಪಾಲ ನುಡಿದಾಗ, ನನ್ನ ಆಸ್ತಿಯನ್ನು ನನ್ನ ಮನಸ್ಸಿಗೆ ಬಂದಹಾಗೆ ಮಾಡತೇನಿ ಎಂದು ರೇಗಾಡುವರು. ಕಾಯಿದೆ ಕಾನೂನುಗಳನ್ನು ನಿಮ್ಮಿಂದಲೇ ನಾನು ಕಲಿತಿದ್ದು. ನಮ್ಮೆಲ್ಲ ಆಸ್ತಿಸೇರಿ, ಒಂದು ದಿನಕ್ಕೆ ಐದುಸಾವಿರ ಲಾಭಬರುತ್ತೆ, ಅದರಲ್ಲಿ ಸರಿಯಾದ ನಾಲ್ಕು ಭಾಗವಾಗಿ. ಒಂದು ಭಾಗ ನನಗೆ ಬರಬೇಕು. ದಿನಾಲು ಬೆಳಿಗ್ಗೆ ನನ್ನ ಕೈಯಲ್ಲಿ ಬಂದಿರಬೇಕು ನಿಮ್ಮ ತೀರ್ಮಾನವನ್ನು ಸಾಯಂಕಾಲದೊಳಗಾಗಿ ಹೇಳಬೇಕು, ಇಲ್ಲದಿದ್ದಲ್ಲಿ ನಾನು ಮುಂದಿನ ಕ್ರಮ ಕೈಕೊಳ್ಳತೇನಿ ಎಂದು ಹೇಳಿ ಹೊರಗೆ ಹೋಗುವನು.

ನಾಗನಗೌಡರು ಅನಿವಾರ್ಯವಾಗಿ ಗೋಪಾಲನ ಈ ಬಯಕೆಯನ್ನು ಈಡೇರಿಸಲೇಬೇಕಾಯ್ತು. ಮನೆಯಲ್ಲಿ ಶಾಂತಮ್ಮನವರ ಮನೆಯವಾತಾವರಣ ಕಂಡು ಮತ್ತಷ್ಟು ಕೃಶರಾದರು. ತಮ್ಮ ಗತ ಜೀವನವನ್ನು ನೆನೆಯಿಸಿಕೊಂಡು ಮರುಗಿದರು. ಸುಮಾರು ನಾಲ್ಕಾರ ವರ್ಷದಿಂದ ಈ ಮನೆಯಲ್ಲಿ ಒಂದಿಲ್ಲ ಒಂದು ಕಹಿಘಟನೆಗಳು ನಡೆಯುತ್ತಲಿವೆ. ಗಂಡನ ದುರಾಭಿಮಾನ ಒಂದು ಕಡೆಯಾದರೆ, ಮಕ್ಕಳ ನ್ಯಾಯಮಾರ್ಗ ಮತ್ತೊಂದು ಕಡೆ, ಇದರಲ್ಲಿ ಯಾರಿಗೆ ಹಿತವಾದರೆ ಯಾರಿಗೆ ಲಾಭ. ಈ ತರಹದ ನೂರಾರು ವಿಚಾರಗಳು ಮನದಲ್ಲಿ

ಹೊಕ್ಕು ಮನಸ್ಸನ್ನು ಅಲ್ಲೋಲ ಕಲ್ಲೋಲ ಮಾಡಿದವು. ಕಮಲಾ ಹಾಗೂ ಗೋಪಾಲರಿರ್ವರೂ ತಾಯಿಗೆ ಸಮಾಧಾನವನ್ನು ಹೇಳಿ ಅವರ ಊಟನಿದ್ರೆಯ ಕಡೆಗೆ ಗಮನವನ್ನು ಕೊಡುತ್ತಿದ್ದರು. ನಾಗನಗೌಡರಾಗಲಿ, ದೀಪಕನಾಗಲಿ ಯಾರೂ ವಿಚಾರಿಸುತ್ತಿರಲಿಲ್ಲ. ನಾಗನಗೌಡರ ಈ ವರ್ತನೆಯನ್ನು ಕಂಡು ಶಾಂತಮ್ಮನವರಿಗೆ ನುಂಗ-ಲಾರದ ತುತ್ತಾಯಿತು. ತಮ್ಮ ಗತಜೀವನವನ್ನು ನೆನೆಯಿಸಿಕೊಂಡು ಮರುಗಿದರು. ಗೌಡರು ಹೆಂಡತಿಯನ್ನು ಒಂದು ದಿನವೂ ಬಿಟ್ಟು ಇರುತ್ತಿರಲಿಲ್ಲ. ಅಕಸ್ಮಾತ್ ತವರುಮನೆಗೆ ಹೋದರೆ, ಎರಡೇ ದಿನದಲ್ಲಿ ಬರಬೇಕು, ಅಂದು ಬರದೇ ಇದ್ದಲ್ಲಿ ಬೆಳಗ್ಗೇನೇ ಬಂದು ಕರೆದುಕೊಂಡು ಹೋಗುತ್ತಿದ್ದರು. ಅಂದಿನ ಸಮಯದಲ್ಲಿ ಗೋಪಾಲ ನನ್ನು ಸುಮಾರು ಹತ್ತು ಹನ್ನೆರಡು ವರ್ಷದವನಾಗುವವರೆಗೂ ಎತ್ತಿಕೊಂಡು ತಿರುಗುತ್ತಿದ್ದರು. ಅದೇ ದೀಪಕ ತನ್ನ ಮಡಿಲಿನಿಂದ ಕೆಳಗೆ ಇಳಿಯುತ್ತಿರಲಿಲ್ಲ. ಇಂದಿನ ಪರಿಸ್ಥಿತಿ ತದ್ವಿರುದ್ಧ. ಎಷ್ಟೊಂದು ಬದಲಾವಣೆ. ಈರ್ವರನ್ನು ಹೆತ್ತ ಈ ಮಡಿಲಿಗೆ ಇಂದೇಕೆ ಈ ಅವಸಾನ? ದೀಪಕನಿಗೆ ನನ್ನನ್ನು ಕಂಡರೇಕೆ ಆಗುವದಿಲ್ಲ. ನನ್ನ ಹೆತ್ತಕರುಳು ಎಲ್ಲರನ್ನು ಒಂದೇಸಮ ಬಯಸುವದಿಲ್ಲವೆ. ಆ ಭಾವನೆ ಆತನಲ್ಲಿಯೇಕೆ ಬರಬಾರದು.

ಅನೇಕ ಯೋಚನೆಗಳ ಸುರಿಮಳೆಯಲ್ಲಿ ಶಾಂತಮ್ಮ ತೊಯ್ದು ಹೋದರು ಕಮಲಳ ಮುಂದೆ ತನ್ನ ಗೋಳನ್ನು ಹೇಳುತ್ತಿದ್ದರು. ಮನೆತನದ ಮರ್ಯಾದೆಗೆ ದಕ್ಕೆ ಬರುವದೆಂದು ತಿಳಿದು ಹೊರಗೆಲ್ಲಿಯೂ ಹೋಗುತ್ತಿರಲಿಲ್ಲ. ಕಮಲ ತಾಯಿಯ ಸೇವೆಯನ್ನು ಬಲು ಜಾಗ್ರತೆ-ಯಿಂದ ಮಾಡುತ್ತಿದ್ದಳು. ದಿನಾಲು ವೈಧ್ಯರು ಬಂದು ಧೈರ್ಯ-ದಿಂದಿರಲು ಹೇಳಿ ಹೋಗುತ್ತಿದ್ದರು. ಶಾಂತಮ್ಮನವರೇ, ನೀವಿನ್ನು ಬಹಳ ಕೆಲಸಗಳನ್ನು ಮಾಡಬೇಕಾಗಿದೆ, ಮಗನ ಮದುವೆ, ಮೊಮ್ಮಕ್ಕಳನ್ನು ಆಡಿಸುವದು, ಸೊಸೆಯಿಂದಿರ ಕಡೆಯಿಂದ ಬೈಯಿಸಿ ಕೊಳ್ಳುವದು ಎಂದು ಹೇಳಿ ಹೋಗುತ್ತಿದ್ದರು. ಮನೆತನದ ವೈದ್ಯರಾದುದ ರಿಂದ ಬಹಳ ಸಲುಗೆಯಿಂದ ಇದ್ದರು. ಎಲ್ಲರನ್ನು ನೀವೆ ದಾರಿಗೆ

ತರಬೇಕು. ಈ ಮನೆತನ ಮೊದಲಿನಂತಾಗಬೇಕು, ನೀವು ಧೈರ್ಯ ದಿಂದ ಇರಬೇಕು. ಗೋಪಾಲ ಕಮಲರ ಆರೈಕೆಯಿಂದಲೋ, ವೈದ್ಯರ ಸಲಹೆಯಿಂದಲೋ ಶಾಂತಮ್ಮನವರು ಗುಣಮುಖರಾದರು. ಸಾಗನ-ಗೌಡರು ಹಾಗೂ ದೀಪಕ ಶಾಂತಮ್ಮನವರ ಬಗ್ಗೆ ಎಳ್ಳಷ್ಟು ವಿಚಾರ ಮಾಡಿರಲಿಲ್ಲ.

೩೩

ಕೊಂಬೆಳಕು ತನ್ನ ಬೆಳಕನ್ನು ನಾಡಿನಾದ್ಯಂತ ಹೊರಚೆಲ್ಲಿ ಜನರ ಮನಸ್ಸನ್ನು ಸಂಪೂರ್ಣ ಸೂರೆಗೊಂಡು ಜನಪ್ರಿಯತೆಯನ್ನು ಹೊಂದಿದೆ. ಸ್ವಯಂ ಸೇವಕರೂ ಸಹ ಸಾಕಷ್ಟು ಸಂಖ್ಯೆಯಲ್ಲಿ ಬೆಳದು ಜನಸಾಮಾನ್ಯರ ಕಲ್ಯಾಣದ ಸಲುವಾಗಿ ತಮ್ಮ ಪ್ರಾಣವನ್ನು ಕೊಡಲು ಸಿದ್ಧರಾಗಿದ್ದಾರೆ. ಶ್ರಮಿಕರ ಹಿತಕ್ಕಾಗಿ ಅನೇಕ ಅನುಕೂಲ ಗಳನ್ನು ಸರಕಾರದಿಂದ ಒದಗಿಸಿಕೊಟ್ಟರು. ಸರಕಾರವು ಕೆಲವೊಂದು ಸಮಸ್ಯೆಗಳನ್ನು ತಿರಸ್ಕರಿಸಿದಾಗ, ಕ್ರಾಂತಿಯನ್ನು ಮಾಡಿ ಪಡೆದು ತಮ್ಮ ಹೆಸರನ್ನು ಗಳಿಸಿಕೊಂಡರು. ಅನೇಕರು ಈ ಗುಂಪಿಗೆ "ಅಪ್ಪಟ ಸಮಾಜವಾದಿ"ಗಳೆಂದು ಕರೆದರು. ದುಡಿಮೆಗಾರರಿಂದ ದುಡಿಸಿ ಕೊಂಡು ತಮ್ಮ ಬಂಡವಾಳವನ್ನು ದ್ವಿಗುಣಗೊಳಿಸುತ್ತ, ತಾವಷ್ಟೇ ಸುಖದ ಸುಪ್ಪತ್ತಿಗೆಯಲ್ಲಿ ಬಾಳುವದು ಶ್ರೀಮಂತವರ್ಗದ ಮುಖ್ಯ ಉದ್ದೇಶ ಆದ್ದರಿಂದ ಅವರೆಂದೂ ತಾವು ದುಡಸಿಕೊಂಡದಕ್ಕೆ ಸರಿಯಾದ ಕೂಲಿಯನ್ನು ಕೊಡುವದಿಲ್ಲ. ಶ್ರಮಿಕರೂ ನಮ್ಮಷ್ಟೇ ಸುಖಿಯಾದರೆ, ನಮ್ಮನ್ನು ನಿರ್ಲಕ್ಷಿಸುವರೆಂಬ ಭಾವನೆಯಿಂದ, ಅವರು ಶ್ರಮಿಕರಿಗೆ ಆರ್ಥಿಕ ಸವಲತ್ತನ್ನು ಕೊಡುವದಿಲ್ಲ. ಇದು ಶ್ರೀಮಂತರ ಮೂಲ ಮಂತ್ರ. ಈ ತಂತ್ರಕ್ಕೆ ಜಗತ್ತಿನ ಅನೇಕ ದುಡಿಮೆಗಾರರು ಬಲಿ ಯಾಗಿದ್ದಾರೆ. ಅವರಿಗೆ ಬದುಕಲು ಸರಿಯಾದ ನೆಲೆಗಳಿಲ್ಲ. ಒಂದು ದೇಶದ ಪ್ರಗತಿಗೆ ಆಯಾದೇಶದ ಕೈಗಾರಿಕಾ ಉದ್ಯಮಗಳೇ ಕಾರಣ.

ಆ ಕೈಗಾರಿಕೆಗಳು ಮುಂದುವರಿಯಲು ಅಲ್ಲಿ ಸತತವಾಗಿ ಶ್ರಮಪಡು-ತ್ತಿರುವ ಕಾರ್ಮಿಕವರ್ಗವೇ ಮುಖ್ಯ ಕಾರಣ. ಯಾವ ದೇಶದಲ್ಲಿ ದುಡಿಯುವ ವರ್ಗಕ್ಕೆ ಬೆಲೆ ಗೌರವ ಇದೆಯೋ, ಆ ದೇಶದಲ್ಲಿ ಶಾಂತಿಯು ತುಂಬಿತುಳುಕುವದು. ಅದನ್ನರಿತು ನಮ್ಮ ದೇಶದ ಕೆಲವೊಂದು ಬುದ್ಧಿಜೀವಿಗಳು, ಸತತವಾಗಿ ದುಡಿದು ನ್ಯಾಯಸಮ್ಮತವಾದ ಅನುಕೂಲತೆಗಳನ್ನು ಬಯಸುವ ದುಡಿಮೆಗಾರರ ಬೇಡಿಕೆಗಳು ಈಡೇರಲಿ ಎಂದು ಹಾರೈಸಿ, ಅವರ ಬೆಂಬಲಿಗರಾಗಿ ನಿಂತರು.

ಮಾನವರೆಲ್ಲರೂ ಸಮಾನರು. ಮಾನವವರ್ಗವನ್ನು ಕಾರಿಪೆಳೆಪು ನಾಶಗೊಳಿಸಿದ ಎಲ್ಲಮಾನವರ ಅಭ್ಯುದಯಕ್ಕಾಗಿ ದುಡಿದು ಅವರ ಜಯವನ್ನು ಬಯಸುವದೇ "ಸಮಾಜವಾದ" ವೆಂದು ಅನೇಕ ಮೇಧಾವಿಗಳು ಕರೆದರು. ಇಂಥಹ ಉನ್ನತಮಟ್ಟದ ವಿಚಾರಧಾರೆಯನ್ನು ಬೆಂಬಲಿಸಿ, ತನುಮನದನದಿಂದ ಸಹಾಯ ಸಲ್ಲಿಸಲು ಸಾವಿರಾರು ಕಾರ್ಯಕರ್ತರು ಮುಂದಾಗಿ ಬರತೊಡಗಿದರು. ಇಂಥಹ ವಿಚಾರಧಾರೆಯನ್ನು ಹೊತ್ತು ಪ್ರಚಾರಮಾಡುತ್ತಿರುವ ಈ ಹೊಂಬೆಳಕು, ಸತ್ಯದ ವಿಚಾರದ ಹಾದಿಯಲ್ಲಿ ನಡೆದು ಮಾನವ ಜನಾಂಗದ ಹೃದಯಕ್ಕೆ ಹೊಸ ಸಂದೇಶವಾಗಿ ಮೂಡಿತು. ಈ ಪತ್ರಿಕೆಯ ವರದಿಗಾರರು ಬಲು ಚಾಣಾಕ್ಷತನದಿಂದ ವರದಿಯನ್ನು ನೀಡಿ ಪತ್ರಿಕೆಯ ಅಭ್ಯುದಯಕ್ಕಾಗಿ ಶ್ರಮಿಸುತಿದ್ದರು. ಅದರಂತೆ ಮುಘುಕರನ ಹರಿತವಾದ ಲೇಖನಗಳು ಅನೇಕ ಬುದ್ಧಿಜೀವಿಗಳ ಮನವನ್ನು ಸೆಳೆದುಕೊಂಡಿದ್ದವು. ಅನೇಕ ಕಟುಸತ್ಯಗಳನ್ನು ವರದಿ ಮಾಡಿದ ವರದಿಗಾರರು ದುಷ್ಕರ್ಮಿಗಳಿಗೆ ಬಲಿಯಾಗಿದ್ದರು. ಅಲ್ಲದೆ ಈ ಗುಂಪಿನ ಮೇಲೆ ಸೇಡನ್ನು ಹೇಗೆ ತೀರಿಸಿಕೊಳ್ಳಬೇಕೆಂದು ವಿಚಾರಮಾಡುತ್ತಲೇ ಇದ್ದರು. ಈ ಮುಘುಕರನ ಗುಂಪಿನ ವಿರುದ್ಧವಾದ ಗುಂಪಿನವರನ್ನೆಲ್ಲ ದೀಪಕ ಕಾಮೇಶರು ಒಂದು ಗೂಡಿಸುತ್ತಿದ್ದರು. ಈ ಗುಂಪಿನಮೇಲೆ ಇಲ್ಲ-ಸಲ್ಲದ ಸುಳ್ಳುಹೇಳಿ, ಹಣದಬಲದಿಂದ ರೌಡಿಗಳನ್ನು ಸಾಕಿಕೊಂಡು ತಿರುಗುತ್ತಿದ್ದರು. ಆದರೆ ನಗರದಲ್ಲಿ ಯಾವ ರೌಡಿಯಾಟವೂ ನಡೆ-ಯುತ್ತಿರಲಿಲ್ಲ. ಗೋಪಾಲನ ಧೈರ್ಯ, ಹಟವನ್ನು ತಿಳಿದವರಾದ

ಅವರೆಲ್ಲ ಯಾವ ಗೋಜಿಗೂ ಹೋಗುತ್ತಿರಲಿಲ್ಲ. ಗೋಪಾಲ ಮಧುಕರನ ಗುಂಪನ್ನು ಸೇರಿ ತಾನೊಬ್ಬ ನಿಷ್ಠಾವಂತ ಕಾರ್ಯ-ಕರ್ತನಾದನು. ನಗರದಲ್ಲಿ ಪಕ್ಷದ ಮುಖ್ಯ ಸಂಚಾಲಕನಾಗಿ ಕಾರ್ಯವನ್ನು ನಿರ್ವಹಿಸತೊಡಗಿದನು. ಯಾವುದೇ ಸರಕಾರಿಯಾಗಲಿ, ಖಾಸಗಿ ಆಫೀಸ್‌ಗಳಲ್ಲಿ ಅನ್ಯಾಯವು ಕಂಡುಬಂದಲ್ಲಿ ಮುನ್ನುಗ್ಗಿ ಬಲವಾಗಿ ಖಂಡಿಸುತ್ತಿದ್ದನು. ಅವರಿಂದೇನಾದರೂ ಪ್ರತಿಕ್ರಿಯೆಬಂದರೆ ಹೊಡೆ-ದಾಟಕ್ಕೂ ತಯಾರಾಗುತ್ತಿದ್ದನು. ನ್ಯಾಯದ ಹಾದಿಯಲ್ಲಿ ನಡೆದು ನಗರದಲ್ಲಿಯೇ ಬಲಿಷ್ಠವಾದ ಗುಂಪೊಂದನ್ನು ತಯಾರಿಸಿದ್ದನು.

ಪರ ಊರಿನಿಂದ ಬಂದು ವಿದ್ಯೆಯನ್ನು ಕಲಿಯಲು ಬರುವ ವಿದ್ಯಾರ್ಥಿನಿಯರನ್ನು ಕೆಲವೊಂದು ಹುಡುಗರು ಚುಡಾಯಿಸಿದ್ದರು. ಅವರನ್ನು ಒದ್ದು ಬುದ್ಧಿ ಹೇಳಿ ಅವರನ್ನು ಹಾದಿಗೆ ತಂದನು. ಇದಲ್ಲದೆ ನಗರದಲ್ಲಿ ಕಾಲೇಜೊಂದರಲ್ಲಿ ದೀಪಕನ ಸಹಪಾಠಿಗಳು ರ್‍ಯಾಗಿಂಗ್ ಪ್ರಕರಣದಲ್ಲಿ ಪಾಲುಗೊಂಡು ಎರಡು ವಿದ್ಯಾರ್ಥಿಗಳು ಆತ್ಮಹತ್ಯೆಯನ್ನು ಮಾಡಿಕೊಂಡಿದ್ದರು. ಅದನ್ನು ಹೊಂಬೆಳಕು ಪ್ರಕಟಿಸಿತ್ತು. ಇದಲ್ಲದೆ ಇನ್ನೂ ನಾಲ್ಕಾರು ಹುಡುಗರು ಈ ರ್‍ಯಾಗಿಂಗ್ ಹಗರಣದಲ್ಲಿ ತೊಂದರೆಗಳನ್ನು ಅನುಭವಿಸುತ್ತಿರುವರೆಂದು ಗೋಪಾಲನಿಗೆ ತಿಳಿದಾಗ, ರಾಯಚೂರಿನ ಶ್ರೀಮಂತಕುಟುಂಬಕ್ಕೆ ಸೇರಿದ ಒಬ್ಬವಿದ್ಯಾರ್ಥಿಯನ್ನು ಹೆದರಿಸಿ, ಆತನ ಸಂಗಡ ಯಾವುದೋ ಹುಡುಗಿಯ ಫೋಟೋ ಲಗತ್ತಿಸಿ, ಆತನನ್ನು ಹೆದರಿಸಿ ಹಿಂಸಿಸಿ ಆತನಿಂದ ಹಣವನ್ನು ಕಿತ್ತುಕೊಳ್ಳುತ್ತಿದ್ದರು. ಒಂದು ದಿನ ಗೋಪಾಲನು ಬ್ಯಾಂಕಿಗೆ ಹೋದಾಗ ಬಹಳ ಗದ್ದಲವಿದ್ದುದರಿಂದ ಅಲ್ಲಿಯೇ ನಿಂತನು. ಅಷ್ಟರಲ್ಲಿ ಕಾಮೇಶನ ಕಾರುಬಂದು ನಿಂತಿತು. ಅದರಲ್ಲಿಂದ ಇಬ್ಬರು ಬಂದಿಳಿದರು. ನೇರವಾಗಿ ನಸ್ಸಿಂದ ದೂರದಲ್ಲಿದ್ದ ಹುಡುಗನನ್ನು ಕರೆದರು, ಆತನನ್ನು ಏನೇನೋ ಕೇಳಿದರು, ಆಗ ಆ ಹುಡುಗನು ಕೆಟ್ಟಮುಖದಿಂದ ತನ್ನಹೊಟ್ಟೆಗೆ ಕೈಯಿಂದ ಬಡಿದುಕೊಳ್ಳುತ್ತಿದ್ದನು. ಅದನ್ನು ಗಮನಿಸದೆ ಜೇಬಿನಿಂದ ಹತ್ತರ ಎರಡು ನೋಟನ್ನು ಕೊಟ್ಟು ಆತನ ಹತ್ತಿರವಿದ್ದ ಬ್ಯಾಂಕಿನ ಟೋಕನ್ ಕಸಿದುಕೊಂಡರು.

ಅಷ್ಟರಲ್ಲಿ ತನ್ನ ನಂಬರನ್ನು ಕರೆದಾಗ ಹಣವನ್ನು ತೆಗೆದುಕೊಂಡು ಹಾಗೆಯೇ ಅವರನ್ನು ಅವಲೋಕಿಸುತ್ತ ನಿಂತನು.

ಹೊರಗೆ ಬಂದು ನೋಡಿದಾಗ ಆ ಹುಡುಗನು ಅಳುತ್ತ ಹೋಗುತ್ತಿದ್ದನು. ಇದರಲ್ಲೇನೋ ಮೋಸವಿದೆಯೆಂದು ಭಾವಿಸಿ ಸಿಪಾಯಿಯನ್ನು ಕರೆದು ಕಾಪಿಯನ್ನು ತೋರಿಸಿ ಹಣವನ್ನು ತಡೆ-ಹಿಡಿಯಲು ಹೇಳುವನು. ಸ್ವಲ್ಪ ಸಮಯದ ನಂತರ ಕಾರ್ಪೋರೇಶನ ಗೆಳೆಯ ಬಂದು ಕೇಳಿದಾಗ, ಆತನಿಂದ ಮತ್ತೊಂದು ಸಹಿಯನ್ನು ಪಡೆಯುವರು. ಎರಡೂ ಸಹಿಗಳು ಒಂದೇ ರೀತಿಯಲ್ಲಿದ್ದವು. ಅಷ್ಟರಲ್ಲಿ ಕಾಲೇಜಿನ ಉಪನ್ಯಾಸಕರೊಬ್ಬರು ಅಲ್ಲಿಗೆ ಬಂದುದನ್ನು ಕಂಡ ಗೋಪಾಲ ಅವರನ್ನು ಕಂಡು ಅವರಿಂದ ನಿಜವಾದ ಮಾಹಿತಿಯನ್ನು ಪಡೆದು, ಆ ಹುಡುಗನನ್ನು ಮ್ಯಾನೇಜರ್ ಹತ್ತಿರ ಕರೆದುಕೊಂಡು ಹೋಗುವರು. ಅಲ್ಲಿ ಉಪನ್ಯಾಸಕರು ಗೋಪಾಲರು ಕುಳಿತಿದ್ದನ್ನು ಕಂಡು ಗಾಬರಿಯಾಗುವನು. ಆಗ ಮ್ಯಾನೇಜರ್ ಪೋಲಿಸರಿಗೆ ಫೋನ್ ಮಾಡುವೆನೆಂದು ನುಡಿದಾಗ, ಉಪನ್ಯಾಸಕರು ಪೋಲಿಸರಿಂದ ಯಾವ ಕೆಲಸಗಳು ಆಗುವದಿಲ್ಲ ಗೋಪಾಲ ನೀನೇ ಆತನನ್ನು ಥಳಿಸಿರಿ ಎನ್ನಲು, ಹಾಗೇ ಮಾಡಿ ಒಳಗಲ್ಲ ಹೊರಗೆ, ಜೀವಮಾತ್ರ ಹೋಗಬಾರದು ಎನ್ನಲು, ಗೋಪಾಲನು ಆತನನ್ನು ಹೊರಗೆಳೆದು ತಂದು ನೋಡುವಷ್ಟರಲ್ಲಿ ಕಾರ್ಪೋರೇಶನ ಕಾರು ಅಲ್ಲಿರಲಿಲ್ಲ, ಆತನ ಮೈಯಲ್ಲ ಹಣ್ಣುಮಾಡಿ ಕೊನೆಗೆ ಪೋಲಿಸರಿಗೆ ಒಪ್ಪಿಸಿದನು.

ನಂತರ ಉಪನ್ಯಾಸಕರ ಸಹಾಯದಿಂದ ರಾಯಚೂರಿನ ಹುಡುಗನ ಹತ್ತಿರಹೋಗಿ ವಿಚಾರಿಸಿದಾಗ ಆತನು ಎಲ್ಲವನ್ನು ವಿಸ್ತರವಾಗಿ ಹೇಳಿದನು. ಮಧುಕರನೂ ಇದ್ದುದರಿಂದ ಬಹಳ ಸಹಾಯಕಾರಿ-ಯಾಯ್ತು. ಅತ್ಯಾನಂದದಿಂದ ಇವರನ್ನು ಬಿಳ್ಕೊಟ್ಟ ಕಾಲೇಜಿನ ಮುಖ್ಯಉಪನ್ಯಾಸಕರು ನಿಮ್ಮಂಥಹ ಪ್ರತಿಭಾವಂತರನ್ನು ಕೊಟ್ಟ ಈ ಕಾಲೇಜು, ಇಂದು ಇಂಥಹ ನೀಚ ಪ್ರವೃತ್ತಿಯನ್ನು ಹೊತ್ತು ಜನರನ್ನು ಮೋಸಮಾಡುತ್ತಿರುವ ವಿದ್ಯಾರ್ಥಿಗಳನ್ನು ಕೊಡುತ್ತಲಿದೆ.

ಆದಕ್ಕಾಗಿ ನನಗೆ ಬಹಳ ದುಃಖವೆನಿಸುವದು. ಇದರಲ್ಲಿ ತಪ್ಪು ಯಾರದು ಎಂದು ವಿಚಾರಮಾಡಿದರೆ ಉತ್ತರಮಾತ್ರ ಸಿಗತಾಯಿಲ್ಲ, ತರಗತಿಯಲ್ಲಿಯೇ ಧೂಮ್ರಪಾನ ಮಾಡುವದು, ಹುಡುಗಿಯರನ್ನು ಚುಡಾಯಿಸುವದು, ಈ ವಿಷಯದ ಮೇಲೆ ಕ್ರಮಕೈಗೊಂಡರೆ ಅವರು ನಮ್ಮನ್ನು ದೊಷಿಸುವರು. ಹೀಗಾಗಿ ನಾವು ಏನನ್ನೂ ಮಾಡದ ಹಾಗಾಗಿದ್ದೇವೆ ಎಂದು ನಿಟ್ಟುಸಿರನ್ನು ಬಿಡಲು, ಅವರಿಬ್ಬರೂ ಮತ್ತೊಮ್ಮೆ ಗುರುಗಳಿಗೆ ನಮಿಸಿ ಹೊರಬರುವರು ದೂರದವರೆಗೂ ಇವರನ್ನೇ ನೋಡಿದ ಗುರುಗಳು ಈರ್ವರೂ ಮರೆಯಾದ ನಂತರ ಒಳಗೆ ಹೋಗುವರು.

೩೪

ಹೊಂಬೆಳಕಿನಲ್ಲಿ ಈ ವಿಷಯವನ್ನು ಮಧುಕರ ಬಲು ಸುಂದರವಾಗಿ ಪ್ರಕಟಿಸಿದ್ದನು. ಅಲ್ಲದೆ ಕಾಲೇಜದಲ್ಲಿ ಉಪನ್ಯಾಸಕರು ಬೇಸರದಿಂದ ನುಡಿದ ನುಡಿಗಳನ್ನು ಸಹ ಬರೆದು ನಮ್ಮ ಶೈಕ್ಷಣಿಕ ಮಟ್ಟವು ಅಧೋಗತಿಗೆ ಹೋಗುತ್ತಿರುವ ಬಗ್ಗೆ ಬರೆದು ಅವಕ್ಕೆ ಸಕಲ ಕಾರಣಗಳನ್ನು ಬರೆದಿದ್ದನು. ರ್‍ಯಾಗಿಂಗ್‌ಗೆ ಸಂಬಂಧಿಸಿದ, ಬ್ಯಾಂಕಿನ ವಿಷಯವನ್ನು ಬರೆದು ಗೋಪಾಲನ ಸಾಹಸವನ್ನು ಕೊಂಡಾಡಿದ್ದನು. ಹೀಗೆ ಗೋಪಾಲ ಸಾರ್ವಜನಿಕರ ಹಿತಾಸಕ್ತಿಗಾಗಿ ಶಕ್ತಿಮೀರಿ ದುಡಿದು ಪಕ್ಷದ ಹೆಸರನ್ನು ಗಗನಕ್ಕೇರಿಸಿದನು. ಇದಲ್ಲದೆ ನಾಗನಗೌಡರ ಮಿಲ್ಲಿನಲ್ಲಿ ಹೈದರಾಬಾದಿನಿಂದ ವ್ಯಾಪಾರಸ್ಥರು ಬಂದಿದ್ದರು. ಅವಕ್ಕಾಗಿ ಆ ಮಿಲ್ಲಿನ ವಿಶೇಷಮನೆಯಲ್ಲಿ, ಕುಡಿತದ ಪಾರ್ಟಿಯನ್ನು ಇಟ್ಟುಕೊಂಡಿದ್ದರಲ್ಲದೆ ಅವರ ಅನುಕೂಲಕ್ಕೆ ಹೆಂಗಸರನ್ನು ಒದಗಿಸಿದ್ದರು. ಈ ವಿಷಯವನ್ನು ತಿಳಿದ ಗೋಪಾಲ ಮಿಲ್ಲಿನ ಮನೆಯಲ್ಲಿ ನುಗ್ಗಿ ಈ ದುಷ್ಟನೀತಿಯನ್ನು ಖಂಡಿಸಿ ಅವರನ್ನು ಪೋಲಿಸರ ವಶಕ್ಕೆ ಒಪ್ಪಿಸಿದನು.

ಇದನ್ನರಿತ ಗೌಡರು ಕೋಟ್ಯಾಂತರ ರೂಪಾಯಿಯ ವ್ಯಾಪಾರವು

ಕೈಬಿಟ್ಟು ಹೋದದ್ದಕ್ಕಾಗಿ ಬಹಳ ರೋಷಗೊಂಡರು. ನನ್ನ ವ್ಯವಹಾರದಲ್ಲಿ ಕೈಹಾಕಬೇಡವೆಂದು ಎಷ್ಟು ಸಲ ನಿನಗೆ ಹೇಳಿಲ್ಲ ಎಂದು ಹೇಳಿದಾಗ, ಅನೀತಿ ಅನ್ಯಾಯ ಕಂಡು ಬಂದಲ್ಲಿ ನಾನು ನುಗ್ಗುವವನೇ ಎಂದು ಹೇಳಿದಾಗ, ನ್ಯಾಯ ನ್ಯಾಯ ಅಂತ ನಿನ್ನ ಮುಂದೇನೆ ಅದೆಷ್ಟು ಜನ ಹಾಳಾಗಿಲ್ಲ. ನ್ಯಾಯದ ಹಾದಿಯನ್ನೇ ತುಳಿದ ಗತಿಯೇನಾಯ್ತು ಎಂಬುದನ್ನು ಸರಿಯಾಗಿ ನೆನೆಯಿಸಿಕೋ. ಪರಿಸ್ಥಿತಿಗನುಗುಣವಾಗಿ ನಾವು ಬದಲಾಗುತ್ತ ಹೋಗಬೇಕು. ಅಂದ-ರೇನೇನಾವು ಈ ಭೂಮಿಯ ಮೇಲೆ ಮನುಷ್ಯರಾಗಿ ಬದುಕಲಿಕ್ಕೆ ಸಾಧ್ಯ. ನೀನೂ ತಿಳಿದವನಿದ್ದಿಯಾ ಸರಿಯಾಗಿ ವಿಚಾರಮಾಡಿನೋಡು ಎಂದು ಗೌಡರು ನುಡಿಯಲು, ಅತೀಕ್ರೋದದಿಂದ ನಿಮ್ಮಂಥ ನೀಚರು ಈ ಭೂಮಿಯ ಮೇಲೆ ಜೀವಂತವಿರುವವರೆಗೂ ನಿಷ್ಠಾವಂತ-ರಿಗೆ ಉಳಿಗಾಲವಿಲ್ಲ. ಹಣದ ಮದದಿಂದ ಏನೆಲ್ಲವನ್ನು ಸಾಧಿಸ ಹೊರಟ ನಿಮ್ಮಂಥ ನೀಚರಿಗೆ ಸರಿಯಾದ ಪಾಠವನ್ನು ಕಲಿಸ-ಬೇಕಾಗಿದೆ. ಈಗಾಗಲೇ ನಿಮ್ಮ ಕೊಬ್ಬು ಅರ್ಧ ಕುಗ್ಗಿದೆ, ಅದು ನಿಮಗೂ ತಿಳಿದಿದೆ. ಹಣವನ್ನು ನ್ಯಾಯವಾದ ಹಾದಿಯಲ್ಲಿ ಗಳಿಸಿರಿ. ಈ ಅನ್ಯಾಯದ ಆಸ್ತಿ ನಿಮ್ಮ ಮಗ ದೀಪಕನಿಗೆ ಬೇಕಾಗಿರಬಹುದು. ಹದಿನೈದು ವರ್ಷಗಳಿಂದ ಕಾಯ್ದುಕೊಂಡು ಬಂದ ಮರ್ಯಾದೆ-ಯನ್ನೆಲ್ಲ ಹಾಳುಮಾಡಿದನಲ್ಲ ಅವನಿಗೆ ಬೆಂಬಲ ನಿಮ್ಮದೇ ಅಲ್ಲವೆ, ನೀವಿಬ್ಬರೂ ಮಾಡಿದ ಕರ್ಮದ ಫಲವನ್ನ ಇಂದು ತಾಯಿ ಅನು-ಭವಿಸ್ತಾಯಿದ್ದಾಳೆ. ಅವಳ ಅವಸ್ಥೆಯೇನಾಗಿದೆ ಎಂಬುದನ್ನು ಒಂದಿನ ವಾದರೂ ವಿಚಾರಿಸಿದ್ದಿರಾ, ಮನೆಯನ್ನು ಬೆಳಗಿದ ಮಹಾದೇವಿ ಯನ್ನ, ನಿಮ್ಮ ಮನದ ತೃಪ್ತಿಗೋಸ್ಕರ ಹಗಲಿರುಳು ದುಡಿದ ನನ್ನ ತಾಯಿ ಸುಮಾರು ತಿಂಗಳಿಂದ ನರಳುತ್ತಿದ್ದರೂ, ಅವಳು ಹೇಗಿದ್ದಾಳೆಂದು ಅರಿಯುವಷ್ಟು ಮಾನವೀಯತೆಯು ಇಲ್ಲದ ನಿಮ್ಮಂಥ ಮಹಿಷಾಸುರ ಭೂಮಿಯ ಮೇಲೆ ಇದ್ದುಯಿಲ್ಲದ ಹಾಗೆ ಎಂದು ನುಡಿದು ಹೊರಗೆ ಹೋಗುವನು.

ಅವನು ಹೋದ ಮೇಲೆ ಏನಪ್ಪಾಜಿ ಅವನು ತಮ್ಮನ್ನು ಎಷ್ಟೊಂದು

ಹೇಳಿದರೂ ನೀವು ಸುಮ್ಮನೆ ಇದ್ದೀರಲ್ಲ. ನಾನೇ ಒಂದೆರೆಡು ಬಾರಿಸಿ ಬಿಡೋಣಂತ ಮಾಡಿದ್ದೆ, ಇದೊಂದು ಸಲ ಹೋಗಲೀಂತ ಬಿಟ್ಟದ್ದೀನಿ ಎಂದು ನುಡಿದು, ಅಪ್ಪಾಜಿ ಕುಮಾರಗೌಡರು ಮನೆಕಡೆಗೆ ಬರಲಿಕ್ಕೆ ಹೇಳಿದ್ದಾರೆ ಹೋಗೋಣಬನ್ನಿರೆಂದು ಹೇಳಿ ಈರ್ವರೂ ಹೋಗುವರು.

೩೫

ಹೊಂಬೆಳಕಿನ ಪಂಚವರ್ಷದ ಕಾರ್ಯಕ್ರಮವನ್ನು ಬಹಳ ವಿಜೃಂಭಣೆಯಿಂದ ಮಾಡುವದಾಗಿ ವಿಚಾರಿಸಿದ್ದರು. ಈ ಕಾರ್ಯ-ಕ್ರಮಕ್ಕೆ ನಾನಾಕಡೆಗಳಿಂದ ಅನೇಕ ಬುದ್ಧಿಜೀವಿಗಳು ಬರುವವರಿದ್ದರು. ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸುವ ಸಲುವಾಗಿ ನೂರಾರು ಕಾರ್ಯಕರ್ತರು ಹಗಲಿರುಳೆನ್ನದೆ, ನಿಷ್ಠೆಯಿಂದ ಬಲು ಹುರುಪಿನಿಂದ ದುಡಿಯುತ್ತಿದ್ದರು. ದೊಡ್ಡಮೈದಾನವನ್ನು ಗುರುತಿಸಿ ಅಲ್ಲಿ ಪೆಂಡಾಲನ್ನು ಹಾಕಿದ್ದರು. ಪ್ರತಿನಿತ್ಯವೂ ರಾತ್ರಿ ಸೇರಿ ಅಂದಿನ ಕಾರ್ಯಕಲಾಪಗಳ ಬಗ್ಗೆ ಚರ್ಚಿಸಿ, ನಾಳೆಯ ಕಾರ್ಯಕ್ರಮಗಳ ಬಗ್ಗೆ ವಿವರವನ್ನು ತೆಗೆದುಕೊಂಡು ಹೋಗುತ್ತಿದ್ದರು. ಬಹಳ ಸಡಗರದಿಂದ ನಡೆಯ ಬೇಕಾದ ಈ ಕಾರ್ಯ ಕೇವಲ ಎರಡು ದಿನ ಉಳಿದಿದೆ. ಎಲ್ಲ ಸಿದ್ಧತೆಗಳು ಬರದಿಂದ ಸಾಗಿವೆ. ಪತ್ರಿಕೆಯ ಸಂಪಾದಕರಾದ ಮಧುಕರನು ಪತ್ರಿಕಾಸಂಘದವರ ತುರ್ತುಸಭೆಯಲ್ಲಿ ಭಾಗವಹಿಸಲು ರಾಜದಾನಿಗೆ ಕರೆಬಂದ ಕಾರಣದಿಂದ, ಮಧುಕರ ಅನಿವಾರ್ಯವಾಗಿ ಹೋಗಿದ್ದರು. ಇತ್ತ ರಾಮು ಆಹಾರ ಸಾಮಗ್ರಿಗಳನ್ನು ತರಲು ಹಾಗೂ ಅಡಿಗೆ ಯವರನ್ನು ಕರೆದು ತರಲು ಪಕ್ಕದ ಊರಿಗೆ ಹೋಗಿದ್ದನು. ಕಾಂತರಾಜ ಹಾಗೂ ಸ್ವಲ್ಪ ಕಾರ್ಯಕರ್ತರು ಪೆಂಡಾಲಿಗೆ ವಿದ್ಯು-ದ್ದೀಪಗಳ ಜೋಡನೆಯಲ್ಲಿ ನಿರತರಾಗಿದ್ದರು. ಅದಲ್ಲದೆ ಕಮಲ, ವಿಮಲಾ ಹಾಗೂ ವಂದನಾ ಮೂವರೂ ಸೇರಿಕೊಂಡು ಈ ಕಾರ್ಯ ಕ್ರಮಕ್ಕೆ ಬರುವ ಮಹಿಳೆಯರ ಸಲುವಾಗಿ ದೊಡ್ಡಮನೆಗಳನ್ನು

ಹುಡುಕಿ ಸ್ವಚ್ಛಗೊಳಿಸುತ್ತಿದ್ದರು. ಪ್ರತಿದಿನದಂತೆ ಇಂದೂ ಸಹ ಎಲ್ಲ ಕಾರ್ಯಕರ್ತರು ಸೇರಿಕೊಂಡಿದ್ದರು.

ಎಲ್ಲರೂ ಸೇರಿ ಸುಮಾರು ಒಂದರ್ಧಗಂಟೆಯು ಕಳೆದಿರಲು, ಇಡೀ ಮುದ್ರಣಾಲಯದಲ್ಲೆಲ್ಲ ಉರಿಯು ಹಬ್ಬಿಕೊಂಡಿತು. ಕಾರ್ಯಕರ್ತರೆಲ್ಲರೂ ನೆಲಮನೆಯಲ್ಲಿ ಸೇರಿದ್ದರಿಂದ ಇವರಿಗೆ ಬೇಗನೆ ಗೊತ್ತಾಗಲಿಲ್ಲ. ಪ್ರೆಸ್ಸಿನ ತುಂಬೆಲ್ಲ ಪೇಪರಿದ್ದ ಕಾರಣ ಎಲ್ಲ ಕಡೆಗೆ ಹಬ್ಬಿಕೊಂಡಿತು. ದುಷ್ಕರ್ಮಿಗಳಿಬ್ಬರೂ ಬಾಗಿಲಿನಲ್ಲಿ ನಿಂತುಕೊಂಡಿದ್ದರು. ನೆಲಮಾಳಿಗೆಯಿಂದ ಬಾಗಿಲನ್ನು ತೆಗೆದು ಹೊರಗೆ ಬಂದಾಗ ತಮ್ಮ ಹತ್ತಿರವಿದ್ದ ಕೈಬಾಂಬ್‌ಗಳನ್ನು ಎಸೆದರು. ಹೀಗೆ ಕೈಬಾಂಬ್‌ಗಳನ್ನು ಎಸೆದಾಗ ಮನೆಯು ಅಲ್ಲಲ್ಲಿ ಕುಸಿದು ಕಾರ್ಯಕರ್ತರು ಸಾವನ್ನಪ್ಪಿದರು. ಹಳೆಯ ಕಾಲದ ಕಟ್ಟಿಗೆಯ ಮನೆಯಾದ್ದರಿಂದ ಪ್ರಯತ್ನಪಟ್ಟು ಹೊರಗೆ ಬರಲು ಪ್ರಯತ್ನ ಮಾಡಿದ ಸಾಹಸಿಗಳ ಮೇಲೆ ಬಿದ್ದು ಅವರೂ ನಾಶವಾದರು. ಹೀಗೆಯೇ ಮತ್ತೆ ಕೆಲವರು ಹೊರಗೆ ಬರಲು ಪ್ರಯತ್ನಿಸಿ ಸಾವನ್ನಪ್ಪಿದರು. ಅದಲ್ಲದೆ ಹೊರಗಿನ ಜನರು ಸಹ ಒಳಗೆ ಬರಲು ಪ್ರಯತ್ನಿಸಿದರು. ಬೆಂಕಿಯು ಬಹಳವಿದ್ದುದನ್ನರಿತು ಅಗ್ನಿಶಾಮಕದಳದವರಿಗೆ ತಿಳಿಸಿದರು. ಅಲ್ಲದೆ ಪೋಲಿಸ್ ಇಲಾಖೆಗೆ ತಿಳಿಸಿದರು. ಹೊರಗಿನಿಂದ ಸಾರ್ವಜನಿಕರು ನೀರಿನಿಂದ ನಂದಿಸಲು ಪ್ರಯತ್ನ ಪಡುತ್ತಿತ್ತು. ಒಳಗಿದ್ದ ದುಷ್ಕರ್ಮಿಗಳು ಹೊರಗಿನ ಜನರ ಹಾಹಾಕಾರವನ್ನು ಅರಿತು, ಪಾರಾಗಬೇಕೆಂದು ಪ್ರಯತ್ನಿಸುತ್ತಿರುವಾಗ ಉರಿಯುತ್ತಿದ್ದ ಕಟ್ಟಿಗೆಯ ತೊಲೆಯೊಂದು ಅವರ ಮೇಲೆ ಬಿದ್ದು ಅವರೂ ಭಸ್ಮವಾದರು. ಅಷ್ಟರಲ್ಲಿ ಅಗ್ನಿಶಾಮಕದಳದವರು ಬಂದು ಬೆಂಕಿಯನ್ನು ನಂದಿಸಿದರು.

ನಂತರ ಒಳಗಿದ್ದ ಶರೀರಗಳನ್ನು ಹೊರಗೆ ತಂದು ಹಾಕಿದರು. ಆದರೆ ಅವು ಯಾವವು ಎಂಬುದು ಗುರುತುಹತ್ತಲಿಲ್ಲ. ಈ ತರಹದ ಅಹಿತಕರವಾದ ಘಟನೆಯು ನಡೆಯ ಬೇಕಾದರೆ ಆಕಸ್ಮಾತ್ ಆಗಿರದೆ ಮುಂದಾಲೋಚನೆಯಿಂದೇ ನಡೆದಿದೆಯೆಂದು ಅನೇಕರು ಅಭಿಪ್ರಾಯ

ಪಟ್ಟರು. ಅಷ್ಟರಲ್ಲಿ ನಗರದಾಚೆಗೆ ಹೋದ ರಾಮು ಬಂದನು. ಕಾಂತರಾಜ, ಕಮಲ, ವಿಮಲಾ ಸಹ ಬಂದರು. ಮುದ್ರಣಾಲಯಕ್ಕೆ ಹತ್ತಿದ ಬೆಂಕಿನಂದಿತು. ಆದರೆ ರಾಮು, ಕಾಂತರಾಜ, ಕಮಲಾ, ವಿಮಲರ ಆತ್ಮಕ್ಕೆ ಹತ್ತಿದ ಬೆಂಕಿ ಮತ್ತಷ್ಟು ಪ್ರಜ್ವಲಿಸಿತು.

೩೬

ರಾಮು, ಕಾಂತರಾಜರು ಶವಗಳ ಮೇಲೆ ಬಿದ್ದು ಹೊರಳಾಡಿ ಅಳಹತ್ತಿದರು. ಕಮಲಾ, ವಿಮಲರು ಅವರನ್ನು ಸಮಾಧಾನ ಪಡಿಸಲು ಪ್ರಯತ್ನಿಸಿ ನಿಷ್ಫಲರಾಗಿ ನಿಂತರು. ಈ ಸುದ್ದಿಯನ್ನು ತಿಳಿದ ಆನಂದನ ತಂದೆ ಓಡಿ ಬಂದರು. ಅಲ್ಲದೆ ಅನೇಕ ಕಾರ್ಯಕರ್ತರು ಸೇರಿಕೊಂಡು ತಮ್ಮ ಮನಬಂದಂತೆ ಬಯ್ಯಲು ಪ್ರಾರಂಭಿಸಿದರು. ತಮ್ಮ ಕೋಟ್ಯಾಂತರ ರೂಪಾಯಿ ಆಸ್ತಿಯ ಹಕ್ಕುದಾರ ಆನಂದನ ಶವವಿಂದು ಪತ್ತೆಯಿಲ್ಲದೆ ಬಿದ್ದಿದೆ. ತಮ್ಮ ಹೃದಯವನ್ನು ಬಲು ಕಠೋರವಮಾಡಿಕೊಂಡು ರಾಮು ಹಾಗೂ ಕಾಂತಾರಾಜರನ್ನು ತಬ್ಬಿ ಕೊಂಡು ಅವರನ್ನು ಸಮಾದಾನ ಮಾಡಿದರು. ಏಳಪ್ಪ ರಾಮು, ಏಳು ಕಾಂತರಾಜು ಹೀಗೆ ಅಳುತ್ತ ಕುಳಿತರೆ ಅವರೆಲ್ಲ ಮರಳಿ ಬರುವರೇನಪ್ಪ. ನಿಮ್ಮ ಹತ್ತಿರ ಇಷ್ಟೇ ಜನರಿಲ್ಲ, ಸಾವಿರಾರು ಜನರಿದ್ದಾರೆ. ಸಾವಿರಾರು ಆನೆಗಳ ಬಲವನ್ನು ಎದುರಿಸುವ ಶಕ್ತಿ ನಿಮ್ಮಲ್ಲಿದೆ. ಆ ಶಕ್ತಿಯನ್ನು ಉಪಯೋಗಿಸಿ ನಿಮ್ಮ ಮುಂದಿನ ಕೆಲಸಕಾರ್ಯಗಳನ್ನು ಮುಗಿಸಿರಿ. ಹೊಸ ಸಮಾಜದ ನಿರ್ಮಾಣವನ್ನು ಮಾಡಿಯೇ ತಿರುವೆವೆಂದು ಪ್ರತಿಜ್ಞೆಮಾಡಿರಿ. ಅದನ್ನು ನಾವು ನೀವೆಲ್ಲ ಮಾಡಿ ತೋರಿಸಿದಾಗಲೇ ಅವರ ಆತ್ಮಕ್ಕೆ ಶಾಂತಿಸಿಗುವದು. ಹೀಗೆ ಕೂಡ್ರಬಾರದೆಂದು ಆನಂದನ ತಂದೆ ಸಮಾದಾನ ಹೇಳಿದರೆ, ಹೌದು ರಾಮು ಈ ಹೀನಕಾರ್ಯದ ಹಿಂದೆ ಯಾರು ಯಾರು ಇರುವರೆಂದು ಪತ್ತೆಹಚ್ಚೋಣ ಅವರ ರುಂಡವನ್ನು ಚಂಡಾಡಿ ಈ ಬೆಂಕಿಯಲ್ಲಿ ಅವರನ್ನು ಹಾಕಿ ಬಿಡೋಣ ಏಳಿ ರಾಮು, ಶಾಂತಿ,

ಶಾಂತಿ ಅನ್ನುತ್ತ ಕುಳಿತರೆ ನಾವೂ ಇದೆ ಗತಿಗೆ ಹೋಗಬೇಕಾಗುವದು, ನೋಡಲ್ಲಿ, ಕಾರ್ಯಕರ್ತರ ಮನದ ಇಂಗಿತವನ್ನು ತಿಳಿ ಎಂದು, ನೂರಾರು ಕಾರ್ಯಕರ್ತರು ಮನಬಂದಂಥಹ ಆಯುಧಗಳನ್ನು ಹಿಡಿದು ಕೊಂಡು ನಿಂತಿದ್ದನ್ನು ಪ್ರಭಾ ತೋರಿಸುವಷ್ಟರಲ್ಲಿ, ಪೋಲಿಸಧಿಕಾರಿಗಳು ಅಲ್ಲಿಗೆ ಬಂದರು.

ಅಧಿಕಾರಿಯು ಎಲ್ಲ ಶವಗಳನ್ನು ನೋಡಿ ಎಣಿಸಿಕೊಂಡು ಫೋಟೋ-ಗಳನ್ನು ತೆಗೆದು ಬಂದು ಈ ಕಾರ್ಯನಡೆಯಲು ಯಾರ ಮೇಲಾ-ದರೂ ಸಂಶಯವಿದೆಯಾ ಎಂದು ಕೇಳಲು, ನಮಗೇನೂ ಗೊತ್ತಿಲ್ಲ-ವೆಂದು ಹೇಳುವರು. ನಂತರ ರಾಮುನನ್ನು ಕೇಳಿದಾಗ, ನಮಗೆ ಗೊತ್ತಿದ್ದರೆ ಈ ಬೆಂಕಿಯಲ್ಲಿ ಅವರ ಶವಗಳನ್ನು ಪಂಚನಾಮೆ ನೀವೇ ಮಾಡಬೇಕಾಗುತ್ತಿತ್ತು ಎಂದು ನೋವುತುಂಬಿದ ಕೋಪದಿಂದ ನುಡಿ-ಯಲು, ನೀವು ಧೈರ್ಯದಿಂದಿರಿ, ಸುದಾರಿಸಿಕೊಳ್ಳಬೇಕು ಎನ್ನುತ್ತ, ಕಮಲ ವಿಮಲರನ್ನು ಇದೇ ಪ್ರಶ್ನೆ ಕೇಳಿದಾಗ, ಸುಮ್ಮನೆ ಕೇಳಿ ಬರೆದುಕೊಂಡು ಪೇಪರ್ ಮಸಿಯನ್ನೇಕೆ ಹಾಳುಮಾಡುವಿರಿ. ಇದು ಬಡವರ ಮನೆ ಹಾಳಾಗಿದ್ದುದು, ಶ್ರೀಮಂತರದಾಗಿದ್ದರೆ ವರದಿ ಒಪ್ಪಿಸಿದ ತಕ್ಷಣದಲ್ಲಿ ಎಲ್ಲರೂ ಓಡಿಬರುತ್ತಿದ್ದಿರಿ. ನಾವು ವರದಿ ಒಪ್ಪಿಸಿದ ಅರ್ಧಘಂಟೆಯ ಮೇಲೆ ನೀವಿಲ್ಲಿ ಬಂದಿರುವಿರಿ. ನೀವಾಗಲಿ, ನಿಮ್ಮ ಕಾನೂನುಗಳಾಗಲಿ, ಶ್ರೀಮಂತರ ಪರವೇ ಹೊರತು ಬಡವರ ಪರವಲ್ಲ. ಕಾನೂನುಗಳನ್ನು ಬಳಸುವಲ್ಲಿಯೂ ಸಹ ವರ್ಗಬೇಧವನ್ನು ಎತ್ತಿ-ತೋರಿಸುವ ನಿಮ್ಮಂಥವರು, ಕಾನೂನು ಸಂರಕ್ಷಣೆಗಾರರೇ ಹೊರತು ಸಾರ್ವಜನಿಕರ ಸಂರಕ್ಷಕರಲ್ಲ ಎಂದು ಕಮಲ ನುಡಿದಾಗ, ನೀವು ತಪ್ಪು ತಿಳಿದು ಕೊಂಡಿದ್ದೀರಿ. ಮೆಡಮ್ ನೀವು ವರದಿ ಒಪ್ಪಿಸಿದ ತಕ್ಷಣವೇ ಬಂದಿದೀವಿ. ನಮ್ಮ ಇಲಾಖೆಯಿರುವದೇ ನ್ಯಾಯವನ್ನು ಒದಗಿಸುವ ಸಲುವಾಗಿ. ನಮ್ಮ ಇಲಾಖೆಯ ಬಗ್ಗೆ ನಿಮ್ಮ ಅನುಮಾನ ವಿದ್ದರೆ ಅದೇನೆಂದು ಹೇಳಿನೋಡೋಣ ಎಂದು ಪೋಲಿಸ್ ಮುಖ್ಯ ಅಧಿಕಾರಿ ಕೇಳಿದರು.

ನಿಮ್ಮ ಇಲಾಖೆ ಇರುವದು ಹಣವಂತರ ಅಡಿಯಾಳಾಗಿ. ನಮ್ಮ ದೇಶದ ಸಂವಿದಾನವೇ ಶ್ರೀಮಂತವರ್ಗದ ಶ್ರೇಯಸ್ಸನ್ನು ಬಯಸುತ್ತಿರುವಾಗ ನೀವೇನು ಮಾಡಲಿಕ್ಕೆ ಸಾಧ್ಯವಾಗ್ತದೆ ಎಂದು ಕಮಲ ನುಡಿದಾಗ, **ಹಾಗೆಲ್ಲ** ಸಂವಿದಾನಕ್ಕೆ ಅವಮಾನ ಮಾಡಬಾರದಮ್ಮಾ. ಅದು ದೇಶಕ್ಕೆ **ದ್ರೋಹ** ಬಗೆದಂತೆ ಎಂದು ಅಧಿಕಾರಿಗಳು ಹೇಳಿದಾಗ, ಹೌದೇ ! ಇದೇ ಪತ್ರಿಕೆಯ ಸಂಪಾದಕರಾದ ಸಂಗಪ್ಪಮಾಸ್ತರರ ಕೇಸು ಎಲ್ಲಿದೆ ನಿಮಗೇನಾದರೂ ಗೊತ್ತಾ ? ಸಂಗಪ್ಪಮಾಸ್ತರರ ಕೇಸು ನಡೆದ ಘಟನೆಯ ವಿವರ ನಿಮಗೇನಾದರೂ ಗೊತ್ತಿದೆಯಾ ? ಮತ್ತೊರ್ವ ಸಂಪಾದಕ ಮಧುಕರರ ಸೋದ ಮಾವನ ಸಂಸಾರವನ್ನೇ ಬೂದಿ ಮಾಡಿದರು, ಅದನ್ನು ಪತ್ತೆಹಚ್ಚಿದರೆ, ಅದನ್ನು ಮುಂದುವರಿಸುವದು ಬೇಡವೆಂದು ಹೇಳಿದವರು ನೀವೇ ಅಲ್ಲವೆ ? ಪತ್ತೆ ಹಚ್ಚಿ ಸತ್ಯಾಂಶ-ವನ್ನು ಹೊರಗೆ ಬಿಡಿ ತಪ್ಪಿತಸ್ಥರಿಗೆ ಸರಿಯಾದ ಶಿಕ್ಷೆ ಸಿಗಲಿ ಎಂದು ಒತ್ತಾಯ ಮಾಡಿದಾಗ, ಆ ಅಧಿಕಾರಿಯನ್ನು ಬೇರೆ ಕಡೆಗೆ ಬದಲಾಯಿಸಿದವರೂ ನೀವೇ ಅಲ್ಲವೆ ? ನಿಮಗಂತೂ ನಿಷ್ಠೆಯೆಂಬ ಪದದ ಅರ್ಥವೇಕೆ ಗಂಧವೇ ಗೊತ್ತಿಲ್ಲ ಅದರರ್ಥ ಅರಿತವರನ್ನು ನಿಮ್ಮ ಇಲಾಖೆ ದುರ್ಮಾರ್ಗಕ್ಕೆ ಒಯ್ಯಲು ಪ್ರಯತ್ನ ಮಾಡುತ್ತಿರುವಾಗ, ನಮ್ಮಂಥಹ ಸಾರ್ವಜನಿಕರ ಗತಿಯೇನಾಗಬೇಕು ? ಬೇಲಿಯೇ ಎದ್ದು ಹೊಲವನ್ನು ತಿಂದು ಹಾಕಿದರೆ ಬೆಳೆಗಳ ಗತಿಯೇನು ? ಎಂದು ಕಮಲ ಕೋಪದಿಂದ ವ್ಯಂಗವಾಗಿ ಮಾತನಾಡಿದಳು.

ನೋಡಮ್ಮ ನೀವು **ನಮ್ಮ** ದೇಶದ ಸಂವಿದಾನಕ್ಕೆ ಬಯ್ದಿದ್ದೀರಾ ಅಲ್ಲದೆ ನಮ್ಮ ಇಲಾಖೆಯ ಗುಪ್ತವಿಚಾರಗಳನ್ನು ನೀವು ಅಪಹರಿಸಿ-ದ್ದೀರಿ ಎಂಬ ಕಾರಣದಿಂದ ನಿಮ್ಮನ್ನು ಬಂದಿಸಬೇಕಾಗ್ತದೆ ಬಹಳ ಎಚ್ಚರಿಕೆಯಿಂದ ಮಾತನಾಡಿ ಎಂದು ಗದರಿಸಲು, ಪೋಲಿಸಧಿಕಾರಿಗಳ ಮಾತನ್ನು ಕೇಳಿ ಕಮಲ ವ್ಯಂಗವಾಗಿ ನಗುತ್ತ, **ನನ್ನನ್ನು** ನೀವು ಯಾವಕಾರಣದಿಂದಲೂ ಬಂದಿಸಲಿಕ್ಕಾಗುವದಿಲ್ಲ. ಅದನ್ನು **ನೀವು** ಸರಿಯಾಗಿ ಗಮನದಲ್ಲಿಟ್ಟುಕೊಳ್ಳಿರಿ. ಈ ಗುಪ್ತವಿಚಾರಗಳನ್ನು ನಾವೇನು

ಕದಿಯಲಿಲ್ಲ ನಿಮ್ಮ ಇಲಾಖೆಯ ನಿಮ್ಮ ಪಕ್ಕದ ವ್ಯಕ್ತಿಯೇ ನಮ್ಮ ಮನೆಗೆ ಬಂದು, ಇದನ್ನೆಲ್ಲನನ್ನು ನಮ್ಮ ಸಾಹೇಬರು ಹೇಳಿದ್ದಾರೆಂದು ನಿಮ್ಮ ಹೆಸರನ್ನು ಹೇಳಿದರು ಬೇಕಾದರೆ ಕೇಳಿ ಎಂದು ಕಮಲಾ ನುಡಿದಾಗ, ಏನ್ರಿ ಇದೆಲ್ಲ ಎಂದು ತನ್ನ ಪಕ್ಕದಲ್ಲದ್ದ ಪೋಲಿಸ್-ಅಧಿಕಾರಿಯನ್ನು ಮುಖ್ಯಧಿಕಾರಿ ಕೇಳಲು ಪೋಲಿಸಧಿಕಾರಿ ಯಾರಿಗೂ ಕೇಳದ ಹಾಗೆ ಏನನ್ನೋ ಹೇಳುವನು.

ಆಗ ಪೋಲಿಸಧಿಕಾರಿ ನೋಡಮ್ಮ ಆವೆಲ್ಲ ರಾಮಾಯಣ ನನಗೊತ್ತಿಲ್ಲ. ಈಗ ನಿನ್ನ ಮನಸ್ಸು ನೋವಿನಿಂದ ತುಂಬಿ ಏನೇನೋ ಮಾತನಾಡತಯಿದ್ದೀರಿ, ನಾಳೆ ಬಂದು ಅವೇನು ಹೇಳುವವಿದೆಯೋ ಪೇಪರದಲ್ಲಿ ಬರದುಕೊಡಿ ಎಂದು ಕಾರನ್ನು ಹತ್ತಲು ಹೋಗುತ್ತಿರುವಾಗ, ಏ, ಪೋಲಿಸಧಿಕಾರಿ ನಿನ್ನ ಪೇಪರದೊಳಗ ಏನರ ಬರೆದುಕೋ, ಆದರೆ ಆ ಶವಗಳನ್ನು ಪಂಚನಾಮೆ ಅಂತ ಶವಗಳನ್ನ ಮುಟ್ಟಿದರೆ ನೆಟ್ಟಗಾಗೊಲ್ಲ, ಅದನ್ನು ನಿನ್ನ ಜನಕ್ಕೆ ಹೇಳಿಹೋಗು ಎಂದು ಒಬ್ಬ ಕಾರ್ಯಕರ್ತನ ಕೂಗನ್ನ ಕೇಳಿ, ಆ ಕೂಗುಬಂದ ಕಡೆಗೆ ನೋಡಿದಾಗ ನೂರಾರು ಜನರು ಆಯುಧಗಳ ಸಮೇತ ನಿಂತಿರುವ-ದನ್ನು ಕಂಡು ಹೆದರಿ, ಪೋಲಿಸಧಿಕಾರಿಗೆ ಏನೋ ಹೇಳಿ ಹೋದನು. ನಂತರ ಪೋಲಿಸಧಿಕಾರಿ ನಿಮ್ಮ ಮನಸ್ಸಿನಂತೆ ಆಗಲಿ ಎಂದು ಆನಂದನ ತಂದೆಗೆ ಹೇಳಿ ಕಾರನ್ನು ಹತ್ತಿಕೊಂಡು ಹೋದರು.

ನಂತರ ಆನಂದನ ತಂದೆಯು ಆಯುಧದಾರಿಗಳನ್ನು ಕರೆದು, ಅವರಿಗೆ ಬುದ್ಧಿವಾದವನ್ನು ಹೇಳುತ್ತ, ನಾವು ಶಾಂತಿಯಿಂದ ವರ್ತಿ-ಸೋಣ. ಮೊದಲು ಸಂಸ್ಕಾರ ಕಾರ್ಯದ ಬಗೆಗೆ ತಯಾರಿ ನಡೆಸಿರಿ, ಅಷ್ಟರಲ್ಲಿ ಮಧುಕರ ಬರಲಹುದು. ಎಂದು ಆನಂದನ ತಂದೆ ಹೇಳಲು, ಶಾಂತಿ ಶಾಂತಿ ಅಂತ ಕುಂತರೆ ನಾವೂ ಹೀಗೆಯೇ ಬೆಂದು ಹೋಗಬೇಕಾಗ್ತದೆ ಸಾಹುಕಾರರೆ, ಶಾಂತಿಯನ್ನು ನಂಬಿಕೊಂಡೇ ಮಾಸ್ತರರನ್ನು, ಕರೀಮನನ್ನು ಕಳೆದುಕೊಂಡಿದೀವಿ, ನಿರಪರಾಧಿಗಳಾದ ಮಘನ ಬಂಧುಗಳನ್ನು ಕಳೆದುಕೊಂಡಿದೀವಿ, ಇಂದು ನಮ್ಮ

ಅಂಗಾಂಗಗಳನ್ನೇ ಕಳೆದುಕೊಂಡಿದೀವಿ. ನಮ್ಮಿಂದ ಇನ್ನು ಸಹಿಸಿ-ಕೊಳ್ಳಲು ಸಾಧ್ಯವಿಲ್ಲ. ನಮ್ಮನ್ನು ಯಾರು ತಡೆಯಬೇಡಿ ಮಧುಕರ ಬರುವದರೊಳಗಾಗಿ, ಶತ್ರುಗಳ ರುಂಡಗಳನ್ನು ಚೆಂಡಾಡಿಬಿಡುವದೇ ನಮ್ಮ ಗುರಿ ಎಂದು ಒಬ್ಬ ಕಾರ್ಯಕರ್ತ ನುಡಿದಾಗ, ದಯವಿಟ್ಟು ಅಂಥಹ ಹೀನಕೃತ್ಯಗಳು ನಮ್ಮಿಂದ ಜರಗುವದುಬೇಡ. ನಿಜವಾದ ಅಪರಾಧಿಯಾರೆಂದು ತಿಳಿಯಲಿ. ಸಿಟ್ಟಿನಕೈಯಲ್ಲಿ ಬುದ್ಧಿಯನ್ನು ಕೊಡಬೇಡಿ, ಮಧುಕರ ಬರುವವರೆಗೆ ಶಾಂತರೀತಿಯಿಂದ ನಡೆದು-ಕೊಳ್ಳಿರಿ ಎಂದು ಆನಂದನ ತಂದೆ ನುಡಿದಾಗ, ದಯವಿಟ್ಟು ನಮ್ಮನ್ನು ತಡೆಯಬೇಡಿ, ಸಾಹುಕಾರರೇ ನಿಮ್ಮ ವಂಶದ ಕುಡಿ ಆನಂದನೇ ಬೂದಿಯಾಗಿದ್ದಾನೆ, ಆತನನ್ನು ಕಳೆದುಕೊಂಡ ನಿಮಗೆ ಕೋಪವಿಲ್ಲವೆ, ಎಂದೊಬ್ಬ ಕಾರ್ಯಕರ್ತ ಕೇಳಿದಾಗ, ಅದಕ್ಕಾಗಿಯೇ ಕಣಪ್ಪ ನಿಮಗೆ ಅಷ್ಟೊಂದು ಹೇಳತಾಯಿರೋದು, ನನಗೆ ಆತನೊಬ್ಬನೇ ಮಗನಲ್ಲ ನೀವೆಲ್ಲರೂ ನನ್ನ ಮಗನಕಿಂತಲು ಹೆಚ್ಚು. ಈ ಬೆಂದು ಹೋದವರು, ನೀವುಗಳು ಒಬ್ಬರಿಗೊಬ್ಬರೂ ಕಡಿಮೆಯೆನಿಲ್ಲ. ಇಂಥಹ ಸಾಹಸಿಗಳನ್ನು ಕಳೆದುಕೊಂಡ ಈ ಭೂಮಿಯು ಬರಡಾಗಿದೆ. ಈ ಬಡಮಕ್ಕಳನ್ನು ಕಳೆದುಕೊಂಡು ಈ ಭೂಮಿ ಶಕ್ತಿಗುಂದಿದೆ. ಈ ಭೂದೇವಿಯ ರಕ್ಷಣೆಯ ಹೊಣೆ ನಿಮ್ಮ ಕೈಯಲ್ಲಿದೆ. ಈಗ ನೀಚವರ್ಗ ಬಲಿಷ್ಟವಾಗಿದೆ. ಅವರಿಗೆ ಈ ಗುಂಪಿಷ್ಟ' ಸಾಲದು ಇನ್ನೂ ಬೃಹದಾಕಾರವಾಗಿ ಬೆಳೆಯಬೇಕು. ನೀಚವರ್ಗದವರ ಆತ್ಮನನ್ನು, ಪಶುತ್ವವನ್ನ ಹೋಗಲಾಡಿಸಿ ಪರಿ-ಶುದ್ಧವಾದ ಮಾನವನನ್ನಾಗಿ ಮಾಡುವದೇ ನಮ್ಮೆಲ್ಲರ ಗುರಿಎಂಬುದನ್ನು ನೀವು ಅರ್ಥಮಾಡಿಕೊಳ್ಳಿ. ಸಧ್ಯ ದಯವಿಟ್ಟು ಶಾಂತರಾಗಿ ನನ್ನ ಮಾತನ್ನ ನಡೆಯಿಸಿಕೊಡಿರೆಂದು ಕೈಮುಗಿದು ಕೇಳಿಕೊಳ್ಳಲು ರಾಮು, ಕಾಂತಾರಾಜ ಅವರನ್ನ ತಬ್ಬಿಕೊಳ್ಳುವರು.

ಅದನ್ನರಿತ ಆಯುಧದಾರಿಗಳೆಲ್ಲರೂ ತಮ್ಮ ಆಯುಧಗಳನ್ನು ಒಂದೆಡೆ ಒಗೆದು ಇವರನ್ನು ಬಂದು ಸೇರುವರು ಸಾರ್ವಜನಿಕರು ಮೂಕರಾಗಿ ನೋಡುತ್ತ ನಿಂತಿದ್ದರು. ಆಯುಧದಾರಿಗಳು ಶಾಂತ-

ರಾದದ್ದನ್ನು ಕಂಡು ಹರ್ಷಗೊಂಡರು. ಎಲ್ಲ ಕಾರ್ಯಕರ್ತರು ಸೇರಿ ಶವಸಂಸ್ಕಾರ ಕಾರ್ಯದಲ್ಲಿ ಪಾಲ್ಗೊಂಡರು. ಭಾಗ್ಯ ಸಹ ಬಂದಳು.

೩೭

ಸುಮಾರು ಆರು ಘಂಟೆಯ ನಂತರ ಮಧುಕರ ಬಂದನು. ಎಲ್ಲ ಶವಗಳನ್ನು ಕಂಡು ಮೂರ್ಛೆ ಹೋದನು. ಕಾರ್ಯಕರ್ತರು ಗಾಬರಿಯಿಂದ ವೈದ್ಯರನ್ನು ಕರೆತರುವಷ್ಟರಲ್ಲಿ ಭಾಗ್ಯ ಹಾಗೂ ಕಮಲ ಪ್ರಥಮ ಚಿಕಿತ್ಸೆಯನ್ನು ಮಾಡುತ್ತಿದ್ದರು. ವೈದ್ಯರು ಬಂದನಂತರ ಸ್ವಲ್ಪ ಸಮಯದಲ್ಲಿ ಮಧುಕರನಿಗೆ ಎಚ್ಚರಿಕೆಯಾಗಿ ಅಳಲು ಪ್ರಾರಂಭಿಸುವನು. ಆನಂದನ ತಂದೆ ಅವನಿಗೆ ಸಮಾಧಾನ ಹೇಳಿವರು. ಆದರೂ ಕೂಡಾ ಮಧುಗೆ ದುಃಖವು ತಡೆಯಲಿಲ್ಲ. ರಾಮು, ಕಾಂತಾರಾಜರನ್ನು ತಬ್ಬಿಕೊಂಡು ಅಳಲು ಪ್ರಾರಂಭಿಸಿದನು. ವೈದ್ಯರು, ಆನಂದನ ತಂದೆ, ಎಷ್ಟು ಹೇಳಿದರೂ ಅವನಿಗೆ ತಡೆದುಕೊಳ್ಳುವ ಶಕ್ತಿಯಿರಲಿಲ್ಲ. ಕಮಲ, ವಿಮಲ, ಭಾಗ್ಯ ಎಷ್ಟು ಸಮಾಧಾನ ಹೇಳಿದರೂ ಗಮನಿಸಲಾರದವನಾದನು. ನಂತರ ಆನಂದನ ತಂದೆ, ನೋಡು ಮಧು ಈ ಮುಖವನ್ನ, ವಂಶದ ಕುಡಿಯನ್ನೇ ಕಳೆದು ಕೊಂಡು ನಾನು ಬದುಕಿದ್ದೀನಿ, ಯಾಕೆಗೊತ್ತಾ, ಈ ಸಿಂಹದ ಮರಿಗಳು ಬೆಳೆದು ಮುಂದೆ ಬಂದು ತಮ್ಮ ಸಾಧನೆಗಳನ್ನು ತೋರಿಸುವರೂ ಎಂಬ ಬಲವಾದ ನಂಬುಗೆಯನ್ನು ಹೊತ್ತುಕೊಂಡು ಬದುಕಿದ್ದೀನಿ. ಈ ನಿಮ್ಮ ವರ್ತನೆಯನ್ನು ನೋಡಿದರೆ ಇವು ಸಿಂಹದ ಮರಿಗಳಲ್ಲ ಬೆಕ್ಕಿನ ಮರಿಗಳಂತ ಅನ್ನಿಸುತ್ತಿದೆ. ಸಂಗಾತಿಗಳು ನಮ್ಮ ಹಾದಿ ಕಲ್ಲುಮುಳ್ಳುಗಳಿಂದ ಕೂಡಿದ್ದು, ನಮ್ಮ ಬಲದಲ್ಲಿಯೇ ನಮಗೆ ನಂಬುಗೆಯಿರಬೇಕು ಎಂದು ಹೇಳಿ ಇಂದು ಮಕ್ಕಳ ಹಾಗೆ ವರ್ತಿಸುತ್ತಿದ್ದೀಯಲ್ಲ, ನಿನಗೆ ಇವರಷ್ಟೇ ಬಂಧುಗಳಲ್ಲ, ನೋಡಲ್ಲಿ

ನಿನ್ನ ಕೈಬಲಪಡಿಸಲು ಸಿದ್ಧರಾದ ಜನರನ್ನು ನೋಡು. ಧೈರ್ಯದಿಂದ ಹೆಜ್ಜೆಯನ್ನು ಇಡು ಎಂದು ಆನಂದನ ತಂದೆ ಹೇಳಿದಾಗ. ಎಲ್ಲರೂ ಗಾಬರಿಯಾದರು. ಮಧುಕರನ ಮನದ ವೇದನೆ ಹೊರಬೀಳುವ ಸಲುವಾಗಿ ಈ ಮಾತನ್ನಾಡಿದರೆಂಬುದು ಕೆಲವರಿಗೆ ಅರ್ಥವಾಯಿತು ನಂತರ ಮಧುಕರ ನನ್ನ ವರ್ತನೆ ನಿಮಗೆ ಬೇಸರ ತಂದಿರಬಹುದು ಯಜಮಾನರೆ ದಯವಿಟ್ಟು ನನ್ನನ್ನು ಕ್ಷಮಿಸಿರೆಂದು ಎರಡೂಕೈಗಳನ್ನು ಮುಗಿಯಲು, ಆತನನ್ನು ತಬ್ಬಿಕೊಂಡು ಮುದ್ದಾಡುವರು. ಕ್ರಮೇಣ ಮಧುಕರನ ಮನಸ್ಸು ಕಲ್ಲಾಗುವದು.

ಅಷ್ಟರಲ್ಲಿ ಪಂಚವಾರ್ಷಿಕದ ಕಾರ್ಯಕ್ರಮವನ್ನು ಮುಂದೆ ಹಾಕಿದ್ದಾಗಿ ಹೇಳಿಕೆಯನ್ನು ಕೊಟ್ಟಿದ್ದಾಗಿತ್ತು. ಅಲ್ಲದೆ ಮಧುಕರನ ಸಂಗಡ ಬಂದ ನಾಲ್ಕಾರು ಅಥಿತಿಗಳು ಮಧುಕರನಿಗೆ ಸಮಾಧಾನ ಹೇಳಿ , ಆದಷ್ಟು ಬೇಗನೆ ನಿಮ್ಮ ಪತ್ರಿಕೆ ಹೊರಬರಲಿ ಎಂದು ಹೋದರು. ಎಲ್ಲರ ಅಪೇಕ್ಷೆಯ ಮೇರೆಗೆ ಅವರವರ ತಂದೆತಾಯಿಗಳ ಅನುಮತಿಯನ್ನು ಪಡೆದು, ಸಂಗಪ್ಪಶಾಸ್ತ್ರರ ಪಕ್ಕದಲ್ಲಿ ಶವಸಂಸ್ಕಾರವನ್ನು ಮಾಡಿದರು. ಆನಂದನ ತಂದೆ ಮರುದಿನ ತಮ್ಮೂರಿಗೆ ಹೋಗಿ ಬಂದು ನಗರದಲ್ಲಿಯೇ ಉಳಿದರು. ಕಾರ್ಯಕರ್ತರ ಕೋಪಾಗ್ನಿ ಇನ್ನು ಆರಿರಲಿಲ್ಲ. ಕಾಂತರಾಜ ಮಾತ್ರ ಎರಡುದಿನದಿಂದ ಯಾರಿಗೂ ತಿಳಿಯದೇ ನಾಪತ್ತೆಯಾಗಿದ್ದನು. ಎಲ್ಲಿ ವಿಚಾರಿಸಿದರೂ ಕಾಂತಾರಾಜನು ಸಿಗಲಿಲ್ಲ. ಆದರೆ ಭಾಗ್ಯಳಿಗೆ ಮಾತ್ರ ಸಂಶಯ ಬಂದಿತು. ಈ ವಿಷಯವನ್ನು ಅವನಿಗೆ ಹೇಳಬಾರದಿತ್ತೆಂದು ಸಂಕಟಪಡಹತ್ತಿದಳು. ಇಂಥಹ ನೀಚರ ಮಧ್ಯ ಈತನೊಬ್ಬನೆ ಏನು ಮಾಡಲು ಸಾಧ್ಯ, ಅಕಸ್ಮಾತ್ ಅವನಿಗೇನಾದರೂ ಆದರೆ ಗತಿಯೇನು.

ಅಂದು ನಾನು ಹೊಟೆಲ್ಲಿಗೆ ಹೋದಾಗ ಕಾಮೇಶ ಹಾಗೂ ಪತ್ರಿಕೆಯ ಸೀಪಾಯಿ ರಾಮುಲು ಸೇರಿಕೊಂಡು ಅಲ್ಲಿಗೆ ಬಂದಿದ್ದರು ಈರ್ವರೂ ಅದ್ಹೇಗೆ ಸೇರಿಕೊಂಡರು ! ಹಿಂದೊಮ್ಮೆ ಹಣದ ಆಶೆಯನ್ನು ತೋರಿಸಿದ ದೀಪಕನನ್ನು ಮರ್ಯಾದೆ ತೆಗೆದು ಕಳಿಸಿದ್ದನು. ಆದರೆ

ಇಂದು ಈರ್ವರೂ ಸೇರಿದ್ದಾರೆಂದ ಬಳಿಕ ಏನೋ ನಡೆದಿದೆಯೆಂದು ತಿಳಿದ ಭಾಗ್ಯ ಅವರನ್ನು ಹಿಂಬಾಲಿಸಿದಳು. ಈರ್ವರೂ ಬಂದು ರೂಮಲ್ಲಿ ಸೇರಿದರು. ನೋಡು ರಾಮುಲು ನೀನು ಯಾವ ಕಾರಣಕ್ಕೂ ನನ್ನ ಹೆಸರನ್ನು ಹೇಳಬಾರದು. ನಿನ್ನೆಯದಲ್ಲದೆ ಮತ್ತೇ ಐದು ಸಾವಿರ ತಗೋ. ನಿನ್ನ ಮಗಳ ಮದುವೆ ಮಸ್ತಾಗಿಮಾಡು, ಈ ವಿಷಯಮಾತ್ರ ಹೊರಬಿಟ್ಟೆ ಅಂದ್ರೆ, ನಿನ್ನ ಮಗಳ ಮದುವೆ ಈ ಜನ್ಮದಲ್ಲಿ ಅಲ್ಲ ಅಂತ ತಿಳಿದುಕೋ, ಆಗಲಿ ಬುದ್ಧಿ ನಿಮಗೆ ಯಾವ ತರಹದ ತೊಂದರೆ ಬರದ ಹಾಗೆ ನಡಕೋತೀನಿ, ನನ್ನ ಮಗಳಿಗೆ ಮಾತ್ರ ಏನೂ ತೊಂದ್ರೆ ಕೊಡಬೇಡಿ ಎಂದು ನುಡಿದು, ಬುದ್ಧಿ, ಅವರಲ್ಲಿ ಯಾರೂ ಉಳಿದಿಲ್ಲವೆ? ಎನ್ನಲು ಭಾಗ್ಯಳ ಕಿವಿ ಮತ್ತಷ್ಟು ಚುರುಕಾದವು. ಎಲ್ಲಾ ಬಡ್ಡಿಮಕ್ಕಳು ಸುಟ್ಟು ಬೂದಿಯಾದರು. ಮಧುಕರನ್ನ ಅದೇಗತಿಗೆ ಮಾಡಲು ಕಾರನ್ನು ಕೊಟ್ಟು ಕಳಿಸಿದ್ದೀನಿ ಎಂದು ಹಲ್ಲು ಕಡಿಯುತ್ತಿರಲು, ಭಾಗ್ಯಳಿಗೆ ಅಲ್ಲಿ ನಿಲ್ಲಲು ಮನಸ್ಸು ಬರಲಿಲ್ಲ. ನನ್ನ ರಾಮುನ ಗತಿಯೇನಾಯ್ತು, ಮಧುಕರನ ಗತಿ ಯೇನಾಯ್ತು ಎಂದು ಗಾಬರಿಯಿಂದ ನಗರಕ್ಕೆ ಆಗಮಿಸಿದಾಗ, ರಾಮುನನ್ನು ಕಂಡು ಸಂತಸಗೊಂಡಳು. ಮಧುಕರನ ವಿಷಯವನ್ನು ಹೇಳುವದು ಯಾರಿಗೆಂದು ವಿಚಾರದಲ್ಲಿರುವಾಗ ಮಧುಕರ ಬಂದೇಬಿಟ್ಟನು. ಭಾಗ್ಯಳಿಗೆ ಇನ್ನೂ ಸಂತೋಷವಾಯ್ತು. ಎಲ್ಲ ಮುಗಿದ ನಂತರ ಕಾಂತಾರಾಜನಿಗೆ ವಿಷಯ ಹೇಳಿದ್ದಳು.

## ೩೮

ವಿಷಯವನ್ನು ತಿಳಿದ ಕಾಂತಾರಾಜ, ರಾಮುಲು, ಮಾಸ್ತರರ ನಿಷ್ಠಾವಂತ ಕಾರ್ಯಕರ್ತನೆಂದು ಹೆಸರಾಗಿದ್ದನು. ಅದ್ಹೇಗೆ ಆ ನೀಚರ ಸಂಗಡ ಹೋದ, ಇದರಲ್ಲಿ ಏನೋ ಅಡಗಿದೆ ಎಂದು ವಿಚಾರಿಸಿ ಅಲ್ಲಿಂದ ಸೀದಾ ಆತನಿದ್ದ ಹೋಟೆಲಿಗೆ ಹೋದನು. ತನ್ನ ಸಂಗಡ

ಒಂದಿಬ್ಬರನ್ನು ಕರೆದುಕೊಂಡು ಹೋದನು. ನೀನು ಇಲ್ಲಿ ಇದ್ದದ್ದು ಮಧುಕರನಿಗೆ ಗೊತ್ತಾಗಿದೆಯಂತೆ ಬೇರೆ ರೂಮನ್ನು ಮಾಡಿದ್ದಾರೆ ಬರಲಿಕ್ಕೆ ಹೇಳಿದ್ದಾರೆಂದು ಹೇಳಿ ಆತನನ್ನು ಕರೆದುಕೊಂಡು ಹೋದರು. ಕಾರು ಊರ ಹೊರಗೆ ಹೋಗಲು ಮತ್ತೊಂದು ಕಾರು ಅವರನ್ನು ಹಿಂಬಾಲಿಸಿತು. ರಾಮುಲುನನ್ನು ಕರೆದುಕೊಂಡು ಹೋದಕಾರು, ಒಂದು ಹಳೆಯ ಮನೆಯ ಮುಂದೆ ನಿಂತಿತು. ಆ ಅಡವಿಯಲ್ಲಿ ಆ ಮನೆಯನ್ನು ಬಿಟ್ಟು ಬೇರೆ ಯಾವ ಮನೆ ಅಲ್ಲಿ ಇರಲಿಲ್ಲ. ರಾಮುಲುನನ್ನು ಕರೆದುಕೊಂಡು ಒಳಗೆ ಹೋದನು. ಅಷ್ಟರಲ್ಲಿ ಅವರನ್ನು ಹಿಂಬಾಲಿಸಿದಕಾರು ಬಂದಿತು. ಕಾಂತಾರಾಜ, ಹಾಗೂ ಮಿತ್ರರನ್ನು ಕಂಡು ರಾಮುಲು ಗಾಬರಿಯಾದನು. ಯಾರು ನೀವೆಲ್ಲಾ ನನ್ನನ್ನೇಕೆ ಇಲ್ಲಿ ಕರೆದುತಂದಿರಿ ಎಂದು ರಾಮುಲು ಕೇಳಿದಾಗ, ಮೊದಲು ನೀನು ಯಾರು ಹೇಳು ಎಂದು ಚಾಲಕನು ರಾಮುಲುನ ಅಂಗಿಯ ಕಾಲರನ್ನು ಹಿಡಿದು ಕೇಳಲು, ನಾನು ಸಿಪಾಯಿ ರಾಮುಲು ಸ್ವಾಮಿ ನೀವೂss ನನ್ನನ್ನು ಗುರುತಿಸಲಾರಿರಾ, ಎಂದು ರಾಮುಲು ನುಡಿಯಲು, ರಾಮುಲು ನಮ್ಮ ಕಛೇರಿಯ ಸಿಪಾಯಿ ನನಗೆ ಚೆನ್ನಾಗಿ ಗೊತ್ತು, ಆದರೆ ನೀನು ಯಾರು ಎಂಬುದನ್ನು ಬಾಯಿಬಿಡತೀಯೋ ಇಲ್ಲವೋ ಎಂದು ಕಾಂತಾರಾಜ ಕೋಪದಿಂದ ಮುಖಕ್ಕೆ ಹೊಡೆಯುವನು.

ಇಲ್ಲಿಂದ ಹೇಗಾದರೂ ಪಾರಾಗಬೇಕೆಂದು ವಿಚಾರಿಸಿ ತನ್ನ ಹತ್ತಿರವಿದ್ದ ಚೂರಿಯನ್ನು ಒಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಲ್ಲಿ ಉಗುರಿನ ಕೈಯನ್ನು ಹಾಕಿಕೊಳ್ಳುವನು. ಆತನನ್ನು ಹಿಡಿಯಲು ಬಂದವರಿಗೆ ಅವುಗಳಿಂದ ಹೆದರಿಸುತ್ತ ಹೊರಗೆ ಬರಲು ಪ್ರಯತ್ನಿಸುತ್ತಿರುವಾಗ, ಕಾಂತಾರಾಜ ಒಂದು ಕಡೆಯಿಂದ ಬಂದು ಆತನ ಕಣ್ಣಿಗೆ ಮಣ್ಣನ್ನು ತೂರಿದಾಗ, ರಾಮುಲು ಕಣ್ಣನ್ನು ಉಜ್ಜುತ್ತಿರುವಾಗ, ಡ್ರಾಯವರ ಆತನನ್ನು ಬಿಗಿಯಾಗಿ ಹಿಡಿಯಲು ಆತನ ಆಯುಧಗಳನ್ನು ಕಸಿದುಕೊಂಡು, ಜೇಬಿನಲ್ಲಿದ್ದ ಎರಡು, ಆತನ

ಮಾತ್ರೆಗಳನ್ನೂ ತೆಗೆದುಕೊಂಡರು. ಆತನ ಹತ್ತಿರವಿದ್ದ "ಹಾವಿನಗುರುತಿನ ಬಿಲ್ಲೆ"ಯನ್ನು ತೆಗೆಸುಕೊಂಡರು. ಈಗ ನೀನು ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲ. ಹೇಳು ಯಾರು ನೀನು ಎಂದು ಕಾಂತಾರಾಜ ರಾಮುಲುನ ಹೊಟ್ಟೆಗೆ ಹೊಡೆಯಲು, ಆತನು ಬಾಯಿಬಿಡದಾದಾಗ, ಮತ್ತೊಬ್ಬನು ರಾಮುಲುನ ಬೆನ್ನಿಗೆ ಎರಡು ಕೈಗಳಿಂದ ಬಲವಾಗಿ ಗುದ್ದಿದಾಗ ಹೇಳದಿದ್ದಾಗ, ಕಾರಿನಚಾಲಕನು ರಾಮುಲು ಹಾಕಿದ ಉಗುರುಗಳನ್ನು ಹಾಕಿಕೊಂಡು ಚೂರಿಯನ್ನು ಹಿಡಿದು ಪರಚಲು ಹೋದಾಗ. ಅಯ್ಯಯ್ಯೋ ಅದರಲ್ಲಿ ವಿಷವಿದೆ ನಾನು ಸತ್ತು ಹೋಗುತೀನಿ ಎಂದು ಚೀರುವನು. ಆಗ ಎಲ್ಲರೂ ಗಾಬರಿಯಾಗುವರು. ಅದನ್ನು ತೋರಗೊಡದೆ ಬೇಗ ಹೇಳು ಎಂದು ಕಾಂತಾರಾಜ ನುಡಿಯಲು, ನಾನು ರಾಮುಲು ಅಲ್ಲ ಅವನ ವೇಷದಾರಿ ಎಂದು ನುಡಿದಾಗ, ಹಾಗಾದರೆ ರಾಮುಲು ಎಲ್ಲಿ? ಎಂದು ಚಾಲಕನು ಹೆದರಿಸಿದಾಗ, ರಾಮುಲುನನ್ನು ನಮ್ಮವರು ಅಪಹರಿಸಿಕೊಂಡು ಹೋಗಿದ್ದಾರೆ, ಅವನ ಸ್ಥಳದಲ್ಲಿ ನಾನು ಬಂದೆ, ಎಂದು ರಾಮುಲು ವೇಷದಾರಿ ನುಡಿದಾಗ, ನಿಮ್ಮವರು ಯಾರು? ಅವರೆಲ್ಲಿದ್ದಾರೆ? ಮುದ್ರಣಾಲಯಕ್ಕೆ ಬೆಂಕಿ ಹಚ್ಚಿದವರು ನಿಮ್ಮವರೇ ಇರಬೇಕು ಅಲ್ಲವಾ? ಎಂದು ಕಾಂತಾರಾಜ ನುಡಿದಾಗ, ಹೌದು ನಮ್ಮವರೆ, ಈ ಕೆಲಸಮಾಡಲು ನಮ್ಮ ಬಾಸ್‌ಗೆ ಒಂದುಲಕ್ಷರೂಪಾಯಿ ಕೊಟ್ಟಿದ್ದಾರೆ, ನಿಮ್ಮ ಗುಂಪೆಲ್ಲ ತೀರಿಸಿದ ನಂತರ ಮತ್ತೊಂದು ಲಕ್ಷವನ್ನು ಕೊಡುವದಾಗಿ ಹೇಳಿದ್ದಾರೆ, ಎಂದು ವೇಷದಾರಿ ನುಡಿದಾಗ, ಯಾರು ನಿಮ್ಮ ಬಾಸ್ ಅವನೆಲ್ಲಿದ್ದಾನೆ ಎಂದು ಚಾಲಕನು ಕೇಳಲು, ನನಗೆ ಗೊತ್ತಿಲ್ಲ ನಾನು ಅದನ್ನು ಹೇಳುವದಿಲ್ಲ ಎಂದು ನುಡಿಯಲು, ಹೇಳತೀಯೋ ಇಲ್ಲವೋ ಎಂದು ಚಾಲಕನು ಒಂದೆರಡು ಹೊಡೆಯುವನು.

ಆದರೂ ಆತನು ಹೇಳದಾದಾಗ ಕಾಂತಾರಾಜ ಚೂರಿಯನ್ನು ತೆಗೆದುಕೊಂಡು ತಿವಿಯಲು ಹೋಗುವನು. ಅಯ್ಯಯ್ಯೋ ಬೇಡಿ ಅದನ್ನೂ ವಿಷದಿಂದ ಮಾಡಿದ್ದಾರೆಂದು ಚೀರುವನು. ಹಾಗಾದರೆ ಹೇಳು ಎಂದು ಚಾಲಕನು ಗದರಿಸಲು, ದಯವಿಟ್ಟು ನನ್ನನ್ನು

ಕೊಲ್ಲಬೇಡಿ, ನನ್ನ ಮಗಳ ಮದುವೆ ನಿಶ್ಚಯವಾಗಿದೆ. ಮುಂದಿನ ತಿಂಗಳಲ್ಲಿ ಮದುವೆಯಿದೆ. ಆಕೆಯನ್ನು ಮೂರು ತಿಂಗಳ ಮಗುವಾಗಿದ್ದಾಗಿನಿಂದ ಬೆಳೆಸಿದ್ದೀನಿ ದಯವಿಟ್ಟು ನನ್ನನ್ನು ಬಿಟ್ಟುಬಿಡಿ ಎಂದು ಕಾಂತರಾಜನ ಕಾಲನ್ನು ಹಿಡಿಯಲು,, ಕಾಂತರಾಜ ಕಾಲನ್ನು ಹಿಂದಕ್ಕೆಳೆದುಕೊಂಡು, ನಿಮ್ಮ ಬಾಸ್ ಮನೆಹೇಳು ಅಂದರೆ ಬಿಡತೀವಿ ಎಂದು ಒಬ್ಬನು ಕೇಳಲು, ಅದನ್ನು ಮಾತ್ರ ಕೇಳಬೇಡಿ ಎಂದು ಅಳಲು ಪ್ರಾರಂಭಿಸುವನು. ಈ ನಾಟಕ ನಾವು ಕೇಳುವದಿಲ್ಲ, ಮೊದಲು ಬಾಸ್ ಮನೆಯಲ್ಲಿದೆ ಹೇಳು ಎಂದು ಚಾಲಕನು ಒಂದೆರಡು ಹೊಡೆಯಲು, ಹೇಳತೀನಿ ಅದುss ಅದುsss ಎಂದು ಹೇಳುತ್ತಿರುವಷ್ಟರಲ್ಲಿ ರಾಮುಲು ವೇಷದಾರಿಗೆ ಡಮಾರ್ ಎಂದು ಗುಂಡು ಹಾರಿಸುವರು. ಶಬ್ದಬಂದ ಕಡೆಗೆ ಕಾಂತಾರಾಜ ಓಡಿದಾಗ, ಒಬ್ಬ ವ್ಯಕ್ತಿ ಓಡುತ್ತ ಪರಾರಿಯಾದನು.

ನಂತರ ವೇಷದಾರಿಯ ಹತ್ತಿರ ಬಂದು ಮನೆಯನ್ನು ವಿಚಾರಿಸುವನು. ಕಾಂತಾರಾಜರೇ ನೀವು ನಿಮ್ಮ ಜೀವನನ್ನು, ಪರ ಹಿತಕ್ಕಾಗಿ ತ್ಯಾಗಮಾಡಲು ಸಿದ್ದರಿದ್ದೀರಿ, ನನ್ನದೊಂದು ಬಯಕೆಯನ್ನು ಈಡೇರಿಸುವಿರಾ ಎಂದು ಕೇಳಿದಾಗ, ಏನದು ಎಂದು ಕಾಂತಾರಾಜ ಕೇಳಲು, ನನ್ನ ಹೆಸರು ರೆಹಮಾನ. ನನ್ನ ಮನೆ ಶಿವಾಜಿನಗರದ ಹತ್ತನೆಯ ಕ್ರಾಸಿನಲ್ಲಿದೆ. ಮಗಳ ಹೆಸರು ರಜಿಯಾ, ದಯವಿಟ್ಟು ಅವಳ ಸಹೋದರನಾಗಿ ನಿಂತು ಮದುವೆಯನ್ನು ಮಾಡಿ ಪುಣ್ಯಕಟ್ಟಿಕೊಳ್ಳಿ ಎಂದು ಅವನ ಕಾಲನ್ನು ಹಿಡಿಯುವಷ್ಟರಲ್ಲಿ, ಆತನ ಪ್ರಾಣಪಕ್ಷಿ ಹಾರಿಹೋಗುವದು. ಎಲ್ಲರೂ ಸೇರಿ ರಾಮುಲು ವೇಷದಾರಿಯನ್ನು ಮನೆಯ ಹೊರಗೆ ತಂದು ನೆಲವಲ್ಲಿ ಹೂಳುವರು. ನಂತರ ಎಲ್ಲರೂ ಸೇರಿ ವೇಷದಾರಿಯನ್ನು ಕೊಂದವರನ್ನು ಹುಡುಕಲು ಪ್ರಾರಂಭಿಸಿದರು. ಚಾಲಕನು, ಕಾಂತಾರಾಜ ನೀವು ಊರಿಗೆ ಹೋಗಿರಿ, ನಾವು ಸಾಯಂಕಾಲ ಬರುವೆವು ಎಂದು ಹೇಳಲು, ಸರಿ ನೀವು ಬನ್ನಿರಿ ಬಹಳ ಹುಸಾರಿಯಿಂದ ಕೆಲಸವನ್ನು ಮಾಡಬೇಕು. ಕೇವಲ ಅವರ

ಸ್ಥಳ ಸಿಕ್ಕರೆ ಸಾಕು ಸಾರ್. ಒನ್ನಿರಿ ಹೆಚ್ಚಿಗೆ ಮುಂದುವರಿಯುವದು ಬೇಡ ಎಂದು ಹೇಳಿ ಕಾಂತಾರಾಜ ನಗರಕ್ಕೆ ಬಂದನು. ಈರ್ವರೂ ಎರಡು ಕಾರುಗಳನ್ನು ತೆಗೆದುಕೊಂಡು ನಗರಕ್ಕೆ ಬಂದರು.

೩೯

ವಿಮಲಳ ಮನೆಯು ಸಾದಾರಣ ದೊಡ್ಡದಿದ್ದುದರಿಂದ ಎಲ್ಲರೂ ಅಲ್ಲಿಯೇ ಸೇರಿದ್ದರು. ವಿಮಲಳ ತಂದೆಯು ದೊಡ್ಡವ್ಯಾಪಾರಿಯಿದ್ದರು, ಆದಕ್ಕಾಗಿ ಮನೆಯ ಪಕ್ಕದಲ್ಲಿಯೇ ಒಂದು ದೊಡ್ಡದಾದ ಕೋಣೆ-ಯೊಂದನ್ನು ಕಟ್ಟಿಸಿದ್ದರು. ಆ ವ್ಯಾಪಾರದ ಕೋಣೆಯಲ್ಲಿ ಎಲ್ಲರೂ ಸೇರಿದ್ದರು. ಆದಷ್ಟು ಬೇಗನೆ ನಮ್ಮ ಮುದ್ರಣಾಲಯವನ್ನು ನಿರ್ಮಿಸಬೇಕೆಂಬ ಉದ್ದೇಶದಿಂದ ನಾವೆಲ್ಲರೂ ಇಲ್ಲಿಗೆ ಬಂದಿದ್ದೇವೆ. ಅಲ್ಲದೆ ಇನ್ನೊಂದೆರಡು ಗುಂಪುಗಳು ಇಷ್ಟರಲ್ಲಿಯೇ ಬರಬಹುದು ಎಂದು ಕಾರ್ಯಕರ್ತ ಶಂಕರ ನುಡಿದಾಗ, ಹೌದು ಶಂಕರ ನಾವೆಲ್ಲರೂ ಸೇರಿ ಆ ಕಾರ್ಯವನ್ನು ಆದಷ್ಟು ಬೇಗನೆ ಪ್ರಾರಂಭಿಸೋಣ ಎಂದು ರಾಮು ನುಡಿದಾಗ ಈತ ಅಂದು ಆಯುಧಧಾರಿಯಾಗಿ ಬಂದ ಗುಂಪಿನವನಲ್ಲವೆ ರಾಮು ಎಂದು ಆನಂದನ ತಂದೆ ನುಡಿದಾಗ, ಹೌದು ಯಜಮಾನರೇ ಅಂದು ನನ್ನಲ್ಲಿ ಸೇಡಿನ ಕಿಡಿ ನನ್ನನ್ನು ಹಾಗೆ ಮಾಡಿಸಿತು. ನನ್ನಲ್ಲಿಯ ಮಾನವೀಯತೆ ಇಲ್ಲದಂತಾಗಿತ್ತು ಆದಿನದ ವರ್ತನೆಗೆ ನಾನಿಂದು ಕ್ಷಮೆಯನ್ನು ಕೇಳುವೆ ಎಂದು ಎದ್ದು ನಿಂತು ಎಲ್ಲರಿಗೂ ಕೈಮುಗಿಯುವನು. ಅಷ್ಟರಲ್ಲಿ ಕಾಂತಾರಾಜ ಒಳಗೆ ಬಂದು, ಮಧುನ ಪಕ್ಕದಲ್ಲಿ ಕೂಡುವನು. ಅಲ್ಲಿದ್ದ ಕಮಲ, ಭಾಗ್ಯಳನ್ನು ಕಂಡು ಗೆಲುವಿನ ಮುಖದಿಂದ ನಗುವನು. ಭಾಗ್ಯ ದೊಡ್ಡದಾದ ಉಸಿರನ್ನು ಬಿಟ್ಟಳು. ಅಷ್ಟರಲ್ಲಿ ಮತ್ತೆರಡು ಗುಂಪುಗಳು ಬಂದು ಸೇರಿಕೊಂಡವು.

ಸ್ಥಳವು ಸಾಲದೇ ಎಲ್ಲರೂ ಇಕ್ಕಟ್ಟಿನಲ್ಲಿ ಕುಳಿತುಕೊಂಡರು

ನೋಡು ಮಧುಕರ ನಿನ್ನ ಬಳಗವನ್ನು, ಇಂಥಹ ಯುವಪೀಳಿಗೆ-ಯಿಂದ ನೀನು ಬಲಗೊಂಡಿರುವಿ. ನಮ್ಮ ಯುವಶಕ್ತಿಯು ಇಂದು ಪ್ರಬಲಗೊಂಡಿದೆ. ಅದನ್ನು ಸರಿಯಾದ ಮಾರ್ಗದಲ್ಲಿ ಒಯ್ಯುವ ನಾವಿಕ ನೀನಾಗಬೇಕು ಎಂದು ಆನಂದನ ತಂದೆ ಹೇಳಿದರೆ, ನಾವು ಯಾವ ಕಾರಣಕ್ಕೂ ಹಿಂದೆ ಸರಿಯಬಾರದು. ನಾವು ಹಿಂಜರಿದರೆ ಈ ನೀಚರು ನ್ಯಾಯದೇವತೆಯನ್ನು ಕೊಲೆಮಾಡಿಬಿಡುವರು. ಅವರನ್ನು ಮುಂದುವರಿಯಲು ಬಿಡಬಾರದು ಎಂದೊಬ್ಬ ಕಾರ್ಯಕರ್ತ ಹೇಳಿದರೆ, ಕ್ರೂರಯಾತನೆಗೆ ಗುರಿಯಾದ ಮಾನವ ಜೀವಿಗಳನ್ನು ಬದುಕಿಸಬೇಕಾಗಿದೆ. ದೇವರ ಹೆಸರಿನಲ್ಲಿ ಧರ್ಮಯುದ್ಧ ಮಾಡ-ಬೇಕಾಗಿದೆ. ನಮಗೆ ಬೆಳಕಿನ, ಸತ್ಯದ ವಿಚಾರವೇ ದೇವರು. ನಮ್ಮ ಹಾದಿಯಲ್ಲಿ ಧೈರ್ಯವಿರಬೇಕು. ಕಷ್ಟಕಾರ್ಪಣ್ಯಕ್ಕೆ ಹೆದರದೆ ಮುಂದೆ ಹೋಗೋಣ. ನಮ್ಮ ಅಂತಿಮ ಗುರಿ ದೂರವಿರಬಹುದು. ಅದನ್ನು ಆದಷ್ಟು ಹತ್ತಿರ ತರುವದು ನಮ್ಮ ನಿಮ್ಮೆಲ್ಲರ ಕೈಯಲ್ಲಿದೆ ಎಂದೊಬ್ಬ ಹೇಳಿದನು. ನಮಗೆ ಯಶಸ್ಸು ಸಿಗಲಿ, ಸಿಗದೇ ಇರಲಿ ನಮ್ಮ ಅಚಲವಾದ ಮನೋಭಾವನೆಯನ್ನು ಮಾತ್ರ ಹಿಂದೆ ತಳ್ಳುವದುಬೇಡ. ನಮ್ಮ ಧ್ಯೇಯಧೋರಣೆಗಳನ್ನು ಸಾಧಿಸಲು ನಮ್ಮ ಪ್ರಾಣವನ್ನು ಸಹ ಕೊಡಲು ಸಿದ್ಧರಾಗಿ ಬಂದಿದ್ದೇವೆ. ಎಂದು ಶಂಕರ ನುಡಿದನು.

ನಿಮ್ಮೆಲ್ಲರ ಮಾತುಗಳು ಅಕ್ಷರಶಃ ಸಹ ನಿಜ. ನಾವು ಈ ಪತ್ರಿಕೆಯನ್ನು ಪ್ರಾರಂಭಿಸಿದಾಗಿನಿಂದ ಮಾಸ್ತರರನ್ನು ಕಳೆದುಕೊಂಡಿದೀವಿ. ನಿರ್ದೋಷಿಗಳಾದ ನನ್ನ ಬಂಧುಗಳು ಹೋದರು. ನಂತರದ ಈ ದುರ್ಘಟನೆಯಲ್ಲಿ ಸುಮಾರು ಇಪ್ಪತ್ತೈದು ವರ್ಷಗಳಿಂದ ಕೂಡಿ ಆಡಿದ ಒಂದೇ ರಂಗದಲ್ಲ ಕೆಲಸಮಾಡುತ್ತಿರುವ ಆನಂದ, ರಾಜೇಶ, ಮೂರ್ತಿ ಸ್ವಾಮಿ, ರಮೇಶ, ಗೋಪಾಲರನ್ನು ಕಳೆದುಕೊಂಡೆವು. ನ್ಯಾಯದ ಹಾದಿಯಲ್ಲಿ ಹೋಗುವವರಿಗೆ ಈ ತರಹದ ಗೌರವವು ನಮ್ಮ ಸಮಾಜದಲ್ಲಿ ದೊರೆಯುತ್ತಿರುವಾಗ, ಇಂದಲ್ಲ ನಾಳೆಯಾದರೂ ನಾವು ಸಹ ಹೀಗೆಯೇ ಒಂದು ದುರ್ಘಟನೆಕ್ಕೆ ಬಲಿಯಾಗುವವರೇ. ನಾವು

ಎಷ್ಟು ನ್ಯಾಯ, ನಿಷ್ಠೆಯಿಂದ ನಡೆದರೂ ನಮಗೆ ಫಲಸಿಗದೇ ಇರುವಾಗ. ನಾವು ಏಕೆ ಮುಂದುವರಿಯಬೇಕು ಎಂದು ಮಧುಕರ ಕೇಳಲು, ಮಧುರವರ ಮಾತು ಅಕ್ಷರ ಸಹ ನಿಜ, ಆದರೆ ನಾವು ಇಂದಿನ ಫಲದ ಸಲುವಾಗಿ ವಿಚಾರವನ್ನು ಮಾಡಬಾರದು. ನಮ್ಮ ಈ ಧ್ಯೇಯಧೋರಣೆಗಳನ್ನು ನಮ್ಮ ನ್ಯಾಯವಾದ ಮಾರ್ಗವನ್ನು ಅರಿತು ಇಂದು ಸಾವಿರಾರು ಕಾರ್ಯಕರ್ತರು ಮುಂದೆ ಬಂದಿದ್ದಾರೆ ಇನ್ನು ಅಭಿಮಾನಿಗಳೆಷ್ಟೋ ಜನರಿದ್ದಾರೆ. ಆದುದರಿಂದ ತಾವು ಹಿಂಜರಿಯದೇ, ನಮ್ಮ ನಿಷ್ಠಾವಂತ ಕಾರ್ಯಕರ್ತರನ್ನು ನಿರಾಶೆ-ಗೊಳಿಸದೆ, ನಮ್ಮ ಗುರಿಮುಟ್ಟುವ ಸಲುವಾಗಿ ಎಲ್ಲರನ್ನು ಕರೆದು ಕೊಂಡು ಹೋಗಿ, ನವಸಮಾಜವನ್ನು ನಿರ್ಮಿಸಲು, ನಮ್ಮ ತನು, ಮನ, ಧನವನ್ನು ಉಪಯೋಗಿಸಿಕೊಳ್ಳಬೇಕೆಂದು ನಾಗರಾಜ ಹೇಳಿದಾಗ, ನಿಮ್ಮೆಲ್ಲರ ಮನಸ್ಸಿನಂತೆಯೇ ಆಗಲಿ ಎಂದು ಮಧುಕರ ಹೇಳಲು, ಎಲ್ಲರೂ ಹರ್ಷದಿಂದ ಜಯಕಾರವನ್ನು ಹಾಕುವರು.

"ಸಮಾಜವಾದ ಬೆಳೆಯಲಿ, ಹೊಂಬೆಳಕು ಚಿರಾಯುವಾಗಲಿ" ಎಂದು ಕಾರ್ಯಕರ್ತರೆಲ್ಲರೂ ಒಮ್ಮತದಿಂದ ಕೂಗಿದರು.

## ೪೦

ಹಳೆಯ ಮುದ್ರಣಾಲಯದ ಪಕ್ಕದಲ್ಲಿಯೇ ಒಂದು ಸ್ಥಳವನ್ನು ಕರೀದಿಸಿ ಹೊಸದಾದ ಮುದ್ರಣಾಲಯವನ್ನು ಕಟ್ಟಿಸಲು ಪ್ರಾರಂಭಿಸಿ-ದರು. ಹೊಸದಾದ ಮುಸಿನ್‌ಗಳನ್ನು ತಂದರು. ಆನಂದನ ತಂದೆ ಸಧ್ಯದ ಖರ್ಚಿಗೆಂದು, ತಮ್ಮ ಹತ್ತಿರವಿದ್ದ ಎರಡು ಲಕ್ಷರೂಪಾಯಿ-ಗಳನ್ನು ಮಧುಕರನಿಗೆ ಕೊಡುತ್ತ, ನೀನು ಮುಸಿನ್‌ಗಳನ್ನು ತೆಗೆದು ಕೊಂಡು, ಕಟ್ಟಡವನ್ನು ಇಂಜನಿಯರರಿಂದ ಡ್ರಾಯಿಂಗ್' ಮಾಡಿಸಿ, ಕೆಲವೊಂದು ಉಪಕರಣಗಳನ್ನು ತೆಗೆದುಕೊಂಡು ಬರಲು ಹೇಳಿದನು. ಮಧುಕರ ಅದನ್ನು ನಿರಾಕರಿಸಿ ನನ್ನ ಹತ್ತಿರ ಅರವತ್ತು ಸಾವಿರ

ಹಣವಿದೆ. ಅಷ್ಟೇಸಾಕು ಮಸಿನ್‌ಗಳನ್ನು ಕಂತಿನಮೇಲೆ ತಂದರಾಯ್ತು ಎಂದು ನುಡಿದಾಗ, ಆನಂದನ ತಂದೆ ಅದಕ್ಕೆ ಒಪ್ಪದೇ ನಿನ್ನ ಹತ್ತಿರವಿದ್ದುದನ್ನು ಮುಂದೆ ಬಳಸಿದರಾಯ್ತು. ನಾನಾದರೂ ಯಾರಿಗಾಗಿ ಈ ಆಸ್ತಿಗಳನ್ನು ಕೂಡಿಡಬೇಕಾಗಿದೆ. ನನ್ನ ಸಮಸ್ತ ಆಸ್ತಿಯನ್ನ ಈ ಮುದ್ರಣಾಲಯದ ಅಭ್ಯುದಯಕ್ಕಾಗಿ ಉಪಯೋಗವಾದರೆ, ನನ್ನ ಮಗನಿಗೂ ಸಂತೋಷವಾಗಬಹುದು ಎಂದು ನುಡಿದಾಗ, ಸರಿಯೆಂದು ನುಡಿದು ಮಧುಕರ ಒಪ್ಪಿಕೊಂಡು, ಯಜಮಾನರೆ ಆನಂದನ ಸವಿ ನೆನಪಿಗಾಗಿ ಕಟ್ಟಡವನ್ನು ಕಟ್ಟಿಸಿರಿ, ಅದರ ಸಂಪೂರ್ಣ ಖರ್ಚು ನಿಮ್ಮದಾಗಲಿ, ಆದರೆ ಮಶಿನ್‌ಗಳನ್ನು ಎಲ್ಲರೂ ಸೇರಿ ತರುವೆವು ಎಂದು ರಾಮು ನುಡಿಯಲು, ಸರಿಯೆಂದು ನುಡಿದು ಮಧುಕರ ನಾನ್ಹೇಳಿದ ಪ್ರಕಾರ ಇಂಜನೀಯರನ್ನು ಕರೆತರಲು ಇನ್ನೂ ನಾಲ್ಕು ಜನರನ್ನು ಕರೆದುಕೊಂಡು ಹೋಗು, ಒಬ್ಬರೇ ತಿರುಗುವದು ಬಹಳ ಕಷ್ಟವೆನಿಸುವದು. ಹೌದು ಮಧುವಣ್ಣ ಈಗಿನ ಈ ಸಂದರ್ಭದಲ್ಲಿ ಒಬ್ಬೊಬ್ಬರಾಗಿ ಯಾರೂ ತಿರುಗಾಡಬೇಡಿ. ನಾಲ್ಕಾರು ಜನರ ಗುಂಪೇಯಿರಲಿ ಎಂದು ಭಾಗ್ಯ ಹೇಳಿದಾಗ, ಹೌದು ನಮ್ಮ ಹುಸಾರಿಯಲ್ಲಿ ನಾವಿರಬೇಕು ಎಂದು ಕಮಲಾ ನುಡಿದಾಗ, ಅದೊಂದು ರೀತಿಯಿಂದ ಒಳ್ಳೆಯದೇ ಎಂದು ಕಾಂತರಾಜ ನುಡಿವನು.

ಮಧುವಣ್ಣ ಈ ನಿಮ್ಮ ಕೆಲಸಕ್ಕೆ ನನ್ನ ಹಾಗೂ ಕಮಲಳ ಅಲ್ಪ ಸಹಾಯವೆಂದು ತಲಾ ಐದು ಸಾವಿರದ ಚಕ್ಕುಗಳನ್ನು ಕೊಡಲು ಬಂದಾಗ, ಮಧುಕರ ಅದನ್ನು ನಿರಾಕರಿಸಿ ಬೇಡ ಭಾಗ್ಯ ದಯವಿಟ್ಟು ನೀವು ಈ ಸಾಹಸಕ್ಕೆ ಕೈಹಾಕಬೇಡಿ. ನಿಮ್ಮ ಹಿರಿಯರು ಇದಕ್ಕೆ ಒಪ್ಪುವದಿಲ್ಲ. ನಿಮಗೆ ಈಗಾಗಲೇ ತೊಂದರೆಗಳು ಸಾಕಷ್ಟಾಗಿವೆ. ಇನ್ನುಮುಂದೆ ಏನೇನು ಅನುಭವಿಸಬೇಕೋ ಎಂದು ಮಧುಕರ ನಿಟ್ಟುಸಿರನ್ನು ಬಿಡುವನು. ಅದರ ಬಗ್ಗೆ ನೀವು ಯಾವದೇ ತರದ ಚಿಂತೆಯನ್ನು ಮಾಡಬೇಡಿ. ಈಗಾಗಲೇ ತೋಯಿಸಿಕೊಂಡಿದ್ದೇವೆ, ಮುಂದೆ ಮಳೆಗೇಕೆ ಅಂಜಬೇಕು, ಎಂದು ಭಾಗ್ಯ ನುಡಿದರೆ,

ಹಿರಿಯರಿಂದ ನಾವು ಎಂದೋ ಬಿಡುಗಡೆಹೊಂದಿ ಬಂದಿರುವೆವು. ನನಗೂ ನನ್ನ ಮನೆಯವರಿಗೂ ಋಣತೀರಿಹೋಗಿದೆ, ನನ್ನ ಪರ-ವ್ಯಕ್ತಿ ಗೋಪಣ್ಣನೇ ಇಲ್ಲದೆ ನಾನು ಹೇಗೆ ಆ ಮನೆಯಲ್ಲಿ ಹೋಗಲಿ ಎಂದು ಕಮಲಳ ಕಣ್ಣಲ್ಲಿ ನೀರು ಬಂದಾಗ, ಮಧುಕರನಿಗೆ ಬಹಳ ಸಂಕಟವಾಯ್ತು ಹಾಗೆಂದರೆ ಹೇಗೆ ಕಮಲ ನಿನ್ನ ಹೆತ್ತ ಒಡಲು ನಿನಗಾಗಿ ಹಂಬಲಿಸಿ ಕೈಬೀಸಿ ಕರೆಯುತ್ತಿರುವಾಗ, ನೀನಿಲ್ಲಿ ಇರುವದು ತಪ್ಪಾಗುವದು ಎಂದು ಮಧು ನುಡಿದಾಗ, ಹೌದು ಕಮಲ ನೀನು ನಿನ್ನ ತಾಯಿಯನ್ನು ಸಂತೈಸಬೇಕು ಎಂದು ತಿಳಿದಾದರೂ ನೀನು ಮನೆಗೆ ಹೋಗಲೇಬೇಕು ಎಂದು ರಾಮು ನುಡಿದಾಗ, ಕಮಲ ಏನೂ ಮಾತನಾಡದೇ ಸುಮ್ಮನಿರಲು, ನೀವು ಮನೆಗೆ ಹೋಗಿ, ಮನೆಯಲ್ಲಿ ಏನಾದರೂ ಚಕಾರ ಎತ್ತಿದರೆ ಇಲ್ಲಿಗೆ ಬನ್ನಿರಿ. ನಿಮ್ಮ ಎಲ್ಲ ಕಾರ್ಯಗಳನ್ನು ನಾನು ಮಾಡುವೆನು ಎಂದು ಆನಂದನ ತಂದೆ ಹೇಳಿದಾಗ, ಭಾಗ್ಯ, ಕಮಲ ಒಪ್ಪಿದರು.

ಮಧುಕರನ ಆದೇಶದ ಪ್ರಕಾರ ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಹಂಚಿಕೊಂಡರು. ಅಷ್ಟರಲ್ಲಿ ಎಲ್ಲರಿಗೂ ತಂಪಾದ ಪಾನೀಯವನ್ನು ವಿಮಲಳ ತಮ್ಮ ತರಲು ಎಲ್ಲರೂ ಕುಡಿಯುವರು. ಇನ್ನರ್ಧ ಘಂಟೆಯಲ್ಲಿ ಊಟ ತಯಾರಾಗುವದು, ಎಲ್ಲರೂ ಊಟ-ವನ್ನು ಮಾಡಿ ಹೋಗಿರೆಂದು ಹೇಳುವನು. ಕಮಲ, ಭಾಗ್ಯ, ವಿಮಲ ಎಲ್ಲರೂ ಸೇರಿ ಎಲ್ಲರಿಗೂ ಊಟವನ್ನು ತಯಾರಿಸಿದರು.

ಕಮಲ ಬಂದು, ಊಟ ತಯಾರಿದೆ ಎಲ್ಲರೂ ಮುಖಗಳನ್ನು ತೊಳೆದುಕೊಳ್ಳಿರೆಂದು ಹೇಳಿ ಹೋಗುವಳು. ನಂತರ ಎಲ್ಲರೂ ಕೈಕಾಲುಗಳನ್ನು ತೊಳೆದುಕೊಂಡು ಊಟಕ್ಕೆ ಕುಳಿತರು. ರವೆಯ ಪಾಯಸ ಹಾಗೂ ಅನ್ನ ಸಾರು ಊಟವನ್ನು ಎಲ್ಲರೂ ಆನಂದದಿಂದ ಉಂಡರು. ನಿಮ್ಮೆಲ್ಲರ ಹೊಟ್ಟೆ ತಣ್ಣಗಿರಲಿ ತಾಯಿ ಈ ತರಹದ ಊಟತಿಂದು ನಾನು ಬಹಳ ದಿನಗಳಾಗಿತ್ತು, ಅಡಿಗೆ ತುಂಬಾ ರುಚಿ ಯಾಗಿದೆ. ನಮ್ಮ ಆನಂದ ಬಹಳ ಸಲ ಹೇಳಿದ್ದ, ಅಪ್ಪಾ, ವಿಮಲಳ

ಕೈ ಅಡಿಗೆ ಊಟವನ್ನು, ಎಷ್ಟು ಉಂಡರೂ ಹಾಗೆಯೇ ಉಣ್ಣ-ಬೇಕೆನಿಸುವಸು ಅಂತಾ, ಆ ಭಾಗ್ಯ ನನಗೀಗ ದೊರಕಿತು. ಅಡಿಗೆ ಮಾಡುವದು ಒಂದು ಕಲೆನಮ್ಮ, ಅದು ಎಲ್ಲರಿಗೂ ಬರುವದಿಲ್ಲ, ಒಬ್ಬೊಬ್ಬರ ಕೈ ಅಡಿಗೆರುಚಿ ಒಂದೊಂದು ತರಹವಿರುತ್ತೆ ಎಂದು ನುಡಿಯುತ್ತ ಊಟವನ್ನು ಮುಗಿಸುವರು. ಕಮಲ, ವಿಮಲ, ಭಾಗ್ಯ ಊಟ ಒಡಿಸಿದರು. ಎಲ್ಲರೂ ಅಡಿಗೆಯ ರುಚಿಯನ್ನು ಹೊಗಳಿದರು.

೪೧

ಕಾಂತಾರಾಜನಿಗೆ ಮೊನ್ನೆಯ ದುರಂತದ ಹಿನ್ನಲೆಯನ್ನು ಮಧುಕರನಿಗೆ ಹೇಳಬೇಕೆಂದು, ಎಷ್ಟೋಸಲ ಪ್ರಯತ್ನಪಟ್ಟರೂ ಸಾಧ್ಯ ವಾಗಧಾಯಿತು. ರಾಮು ಆತನನ್ನು ಬಿಟ್ಟು ಅಗಲುತ್ತಿರಲಿಲ್ಲ. ಕಮಲ, ವಿಮಲ, ಭಾಗ್ಯ ಯಾರಾದರೊಬ್ಬರು ಅವನ ಸಂಗಡವಿದ್ದು ಅವನನ್ನು ಏಕಾಂತದಲ್ಲಿ ಬಿಡದಂತೆ ನೋಡಿಕೊಳ್ಳುತ್ತಿದ್ದರು. ಅತ್ತ ಕಾಮೇಶ, ದೀಪಕರನ್ನು ಹುಡುಕುವದಾಗಿ ಹೇಳಿದವರು ಇನ್ನೂ ಬಂದಿರಲಿಲ್ಲ. ಸುಮಾರು ಮೂರು ದಿನಗಳು ಕಳೆದರೂ ಅವರ ಸುಳಿಯು ಇಲ್ಲದಾಯಿತು. ಅವರಿಗೇನಾದರೂ ಸಂಭವಿಸಿತೇ ಎಂದು ಕಾಂತಾರಾಜ ಗಾಬರಿಯಾದನು. ರಾಮು ಹಾಗೂ ಮಧುಕರ ಏನಾದರೊಂದು ಕೇಳಿದರೆ ಸರಿಯಾಗಿ ಉತ್ತರವನ್ನೇ ಕೊಡುತ್ತಿರಲಿಲ್ಲ ಏಕೆ ! ಮನಸ್ಸು ಸರಿಯಿಲ್ಲವೆ ? ಸುಧಾರಿಸಿಕೋ ಕಾಂತಾ ಮರೆಯಲು ಪ್ರಯತ್ನಿಸು, ಎಂದು ಮಧುಕರ ಸಮಾಧಾನ ಹೇಳುತ್ತಿದ್ದನು.

ಅಷ್ಟರಲ್ಲಿ ಕಾಂತಾರಾಜನಿಗೆ ಪೋಸ್ಟ್‌ಕವರ್ ಬರುವದು, ನಾವು ಸುರಕ್ಷಿತರಾಗಿರುವವೆವು. ಇಷ್ಟರಲ್ಲಿ ನಮ್ಮ ಕಾರ್ಯ ಪೂರೈಸುವದರಲ್ಲಿ ಇರುವೆವು. ನೀವು ಚಿಂತೆಯನ್ನು ಮಾಡಬೇಡಿರಿ. ಕೆಂಪುನಮುನಗಳೊಂದಿಗೆ ನಿಮ್ಮ ಸಂಗಾತಿ ಎಂದು ಬರೆದಿತ್ತು. ಅವನ್ನು ಓದಿದ ಕಾಂತಾರಾಜನ ಮುಖ ಕಳಾಹೀನವಾದದ್ದನ್ನು ಅರಿತು, ರಾಮು ಹಾಗೂ ಮಧು

ಪತ್ರವನ್ನು ಓದಿ, ಪತ್ರವನ್ನು ಬರೆದವರು ನಮ್ಮವರೆ! ಆದರೆ ಇದರ ಹಿನ್ನೆಲೆಽಽಽಽ ಎಂದು ಕಾಂತಾರಾಜನ ಮುಖವನ್ನು ನೋಡುತ್ತ ಮಧು ಏನೋ ಕಾಂತಾ ಇದು ಎಂದು ಕೇಳಲು, ಹೇಳುವ ಸಲುವಾಗಿಯೇ ಮೂರು ದಿನದಿಂದ ಪ್ರಯತ್ನಪಡತಾಯಿದ್ದೀನಿ, ಆದರೆ ಸಾಧ್ಯವಾಗತಾಯಿಲ್ಲ ಎಂದು ಕಾಂತಾರಾಜ ನುಡಿದಾಗ, ಈಗ ಹೇಳಬಹುದಲ್ಲ, ಈಗ್ಯಾರಿದ್ದಾರೆ ಎಂದು ಮಧು ಕೇಳಲು, ಹೇಳತೀನಿ, ಆದರೆ ರಾಮು ನಮಗೊಂದು ಮಾತು ಕೊಡಬೇಕು ಎಂದು ಕಾಂತಾರಾಜ ನುಡಿದಾಗ, ಲೇ ಕಾಂತಾ, ತಗೋ ನನ್ನ ಭಾಷೆ, ನೀನು ವಿಷಯ ಹೇಳುವದಕ್ಕಿಂತ ಮುಂಚೆನೇ ತಗೋ ಅದನ್ನ ನೀನು ಮನಸ್ಸಿಗೆ ಬಂದಂತೆ ಬಳಸಿಕೋ ಎಂದು ತನ್ನೆರಡು ಕೈಗಳನ್ನು ಕಾಂತಾನ ಕೈನಲ್ಲಿ ಒಂದು, ಮಧುನ ಕೈನಲ್ಲಿ ಒಂದಿಡುವನು.

ಆಗ ಕಾಂತಾರಾಜ, ರಾಮು ನಿನಗೆ ತಾಳ್ಮೆ ಕಡಿಮೆ ಮಧುಗೆ ಆಶಕ್ತಿಯಿದೆ, ಅದಕ್ಕೆ ಪರದಾಡತಾಯಿದ್ದೆ. ಈಗ ಉಳಿದವರೆ ನಾವು ಮೂವರೇ, ನಮ್ಮ ಶರೀರದ ಅಂಗಾಂಗಗಳಂತಿದ್ದ ಹತ್ತು ಜನರಲ್ಲಿ, ಏಳುಜನರನ್ನು ವಿಧಿ ನುಂಗಿಕೊಂಡಿದೆ ಅದಕ್ಕಾಗಿಽಽ ಎಂದು ದುಃಖಿಸುವನು. ಲೇ ಅವನ್ನೆಲ್ಲ ಮರೆತುಬಿಡು, ವಿಷಯವೇನು ಮೊದಲು ಹೇಳು ಎಂದು ರಾಮು ನುಡಿದಾಗ, ಭಾಗ್ಯ ಹೇಳಿದಾಗಿನಿಂದ ಪ್ರಾರಂಭಿಸಿ ರಾಮುಲುನ ಅಪಹರಣ ನಕಲಿ ರಾಮುಲುನ ಕೊಲೆ, ನಕಲಿ ರಾಮುಲು ಸಾಯುವಾಗ ಹೇಳಿದ್ದು, ನಂತರ ಕಾರಿನ ಚಾಲಕ ಹಾಗೂ ಮತ್ತೊಬ್ಬ ಕಾರ್ಯಕರ್ತ ಅವರಿರುವ ಸ್ಥಳ ಪತ್ತೆಹಚ್ಚಿಕೊಂಡು, ದೀಪಕ, ಕಾಮೇಶರೆಲ್ಲಿದ್ದಾರೆ, ನೋಡಿಕೊಂಡು ಬರಲು ಹೇಳಿದ್ದೆ, ಆದರೆ ಈ ಪತ್ರವನ್ನು ನೋಡಿದರೆ, ಅವರೇನೋ ಅನಾಹುತವನ್ನು ಮಾಡುವ ಹಾಗೆ ಕಾಣುವದೆಂದು ಅನ್ನಿಸುವದು ಎಂದು ಕಾಂತಾರಾಜ ನುಡಿದಾಗ, ಅವರು ಯಾರು ಯಾರೆಂದು ರಾಮು ಕೇಳಲು, ಅವರ ಹೆಸರನ್ನು ಕಾಂತಾರಾಜ ಹೇಳಲು, ಅವರಿಬ್ಬರು ಒಬ್ಬರಿಗಿಂತ ಒಬ್ಬರು ಹಟವಾದಿಗಳು. ಕಾರಚಾಲಕ ಮಾತ್ರ ತುಂಬಾ ಅಪಾಯದ ವ್ಯಕ್ತಿ. ಅವರು ಸುಮ್ಮನೆ ಮರಳಿ ಬಂದರೆ ನಮ್ಮ ಪುಣ್ಯವೆಂದು ರಾಮು ನುಡಿದಾಗ, ಅವರು

ಏನಾದರೂ ಅನಾಹುತವನ್ನು ಮಾಡಿಕೊಂಡು ಬಂದರೆ, ನಮ್ಮ ಪಕ್ಷಕ್ಕೂ ಹಾಗೂ ನಮಗೆಲ್ಲರಿಗೂ ಬಹಳ ತೊಂದರೆಯಾಗಬಹುದು. ಅವರನ್ನು ಹೇಗಾದರೂ ಪತ್ತೆಹಚ್ಚಿ ಇಲ್ಲಿಗೆ ಬರಲು ಹೇಳಬೇಕು ಎಂದು ಮಧು ನುಡಿಯುತ್ತಿರಲು, ಭಾಗ್ಯ, ಕಮಲ ಅಲ್ಲಿಗೆ ಬರಲು, ಆ ವಿಷಯವನ್ನು ಅಲ್ಲಿಗೇನೇ ನಿಲ್ಲಿಸುವರು.

೪೨

"ಹೊಂಬೆಳಕು" ಪತ್ರಿಕೆಯ ಕಟ್ಟಡದ ಕೆಲಸವು ಬರದಿಂದ ಸಾಗಿದೆ. ಕೇವಲ ಒಂದು ತಿಂಗಳಲ್ಲಿ ಮುಕ್ಕಾಲುಭಾಗ ಕೆಲಸವು ಮುಗಿದಂತಾಗಿದೆ. ಕಟ್ಟಡವನ್ನು ಆಧುನಿಕ ರೀತಿಯಲ್ಲಿ ನಿರ್ಮಿಸಿ, ನಗರದ ವೈರಿಗಳ ಕಣ್ಣುಗಳು ಕುಕ್ಕುವ ಉದ್ದೇಶವನ್ನು ಇಟ್ಟುಕೊಂಡು ಈ ಕೆಲಸಗಳು ಸಾಗುತ್ತಿದ್ದವು. ಕಾರ್ಯಕರ್ತರು ದಿನದ ಇಪ್ಪತ್ನಾಲ್ಕು ಘಂಟೆಗಳ ವರೆಗೆ ದುಡಿಯುತ್ತಿದ್ದರು. ಇಲ್ಲಿ ಬಂದು ಕೆಲಸಮಾಡಲು, ಸುತ್ತ ಮುತ್ತಲಿನ ಪ್ರದೇಶದಲ್ಲಿಯ ಯುವಶಕ್ತಿಯು ಗುಂಪಾಗಿ ಬರುತ್ತಿತ್ತು. ಅಲ್ಲದೆ ನಾಡಿನ ಹೊರಗಿನ ಕೆಲವೊಂದು ಜನರೂ ಸಹ ಬಂದು, ಈ ಗುಂಪಿನ ಸಂಗಡ ದುಡಿದು ತಮ್ಮ ಅಲ್ಪ ಸೇವೆಯನ್ನು ಸಲ್ಲಿಸಿದರು. ಅವರ ಈ ಕಾರ್ಯವೈಖರಿಯನ್ನು ಕಂಡ ನಗರದ ಜನರು ಗಾಬರಿಗೊಂಡರು. ಈ ಮಧುಕರನ ಗುಂಪು ನಮ್ಮ ನಗರದಲ್ಲಿ ಅಷ್ಟೇ ಅಲ್ಲ ಹೊರ ಊರುಗಳಲ್ಲಿ ಹೊರನಾಡಿನಲ್ಲಿಯೂ ಇದೆ ಎಂಬುದು ಅರಿವಾಯಿತು. ನಾಗನಗೌಡರ ಗುಂಪು ಈ ಕೆಲಸವನ್ನು ಕಂಡು ಮತ್ತಷ್ಟು ಕೋಪಗೊಂಡರು. ಕಟ್ಟಡದ ಸಂಪೂರ್ಣ ಖರ್ಚನ್ನು ಆನಂದನ ತಂದೆ ವಹಿಸಿಕೊಂಡಿರುವದನ್ನು ಅರಿತ ನಾಗನಗೌಡರ ಗುಂಪು ಅವರ ಮೇಲೆ ರೋಷಗೊಂಡರು. ಅವರ ಮೇಲೆ ಏನಾದರೊಂದು ನೆಪವನ್ನು ಹೇಳಿ ತಮ್ಮ ಕಡೆಗೆ ಎಳೆದುಕೊಳ್ಳಬೇಕೆಂದು ಹೊಂಚುಹಾಕಿ, ಅವರ ಹತ್ತಿರ ಹೋಗಿ ಛಿಮಾರಿ ಹಾಕಿಸಿಕೊಂಡು ಬಂದರು. ಹೀಗಾಗಿ ಅವರ ಮೇಲೆ ಮತ್ತಷ್ಟು ಕೋಪಬಂದು ಅವರನ್ನೆ ಇಲ್ಲದಂತೆ ಮಾಡಬೇಕೆಂದು ಹೊಂಚುಹಾಕಿ ಕುಳಿತರು.

ಹೊಂಬೆಳಕು ಪತ್ರಿಕೆಯ ಕಟ್ಟಡವು ಬರದಿಂದ ಸಾಗಿತ್ತು. ಇನ್ನೆರಡು ದಿನಗಳಲ್ಲಿ ಅದರ ಉದ್ಘಾಟನಾ ಸಮಾರಂಭವನ್ನು ಮಾಡುವವರಿದ್ದರು. ಅಷ್ಟರಲ್ಲಿ ದೀಪಕ ಹಾಗೂ ಕಾಮೇಶರ ಕೊಲೆಯಾದ ಪ್ರಕರಣವು ನಗರದಲ್ಲೆಲ್ಲ ಹಬ್ಬಿಕೊಂಡಿತು. ಈ ಅನಾಹುತ ಹೇಗಾಯಿತೆಂಬುದು ನಿಗೂಢವಾದ ಸಮಸ್ಯೆಯಾಗಿಯೇ ಉಳಿಯಿತು. ಅವರೀರ್ವರನ್ನು ಚಾಕುನಿಂದ, ಉಗುರಿನಿಂದ ಗಾಯಗೋಳಿಸಿದ ಗುರುತುಗಳು ಶರೀರದ ಮೇಲೆ ಮೂಡಿಕೊಂಡಿದ್ದವು. ಆ ಆಯುಧಗಳಲ್ಲಿ ವಿಷವಿದ್ದು, ಶರೀರವೆಲ್ಲ ಹಸಿರಾದದ್ದು ಕಂಡುಬಂದಿತು. ಅಲ್ಲದೆ ಅವರ ಹತ್ತಿರ ನಾಗರಹಾವಿನ ಗುರುತಿನ ಬಿಲ್ಲೆಗಳಿದ್ದವು. ಹೀಗಾಗಿ ದೀಪಕ-ಕಾಮೇಶರು ಯಾವುದಾದರೊಂದು ಗುಂಡಾಗಳ ಗುಂಪಿನವರೆಂದು ಪೋಲಿಸರು ಅನುಮಾನ ಪಟ್ಟರು. ಈ ಘಟನೆಯು ಮಧುಕರನ ಗುಂಪಿನ ಮೇಲೆ ಯಾವುದೇ ತೆರನಾದ ಪ್ರಭಾವನ್ನು ಬೀರಲಿಲ್ಲ. ಆದರೆ ಕಾಂತಾರಾಜನ ಸಂಗಡ ಹೋದವರು ಇನ್ನೂ ಮರಳಿ ಬಂದಿರಲಿಲ್ಲ. ನಾಗನಗೌಡರು ಈ ಸುದ್ದಿಯನ್ನು ತಿಳಿದು ಬಹಳ ನಿರಾಶೆಹೊಂದಿದರು. ತಮ್ಮ ವಂಶದ ಕುಡಿಗಳೇ ಇಲ್ಲದಂತಾದರು. ತಾವು ಯಾರಿಗಾಗಿ ಬದುಕಬೇಕು ಎಂದು ತಿಳಿದು ಹಾಸಿಗೆಯನ್ನು ಹಿಡಿದರು.

ತಂದೆಯು ಹಾಸಿಗೆಯನ್ನು ಹಿಡಿದಾಗ ಕಮಲ ಅನಿವಾರ್ಯವಾಗಿ, ಅವರ ಆರೈಕೆಯಲ್ಲಿ ತೊಡಗಬೇಕಾಯಿತು. ಕಮಲಳು ಇತ್ತ ತಾಯಿ ಹಾಗೂ ಇತ್ತ ತಂದೆಯ ಆರೈಕೆಯನ್ನು ಮಾಡಿ, ದಿನಕೊಂದು ತಾಸಾದರೂ ಬಂದು ತನ್ನ ಗುಂಪಿನವರನ್ನು ಕಂಡು ಹೋಗುತ್ತಿದಳು. ಒಂದೊಂದು ದಿನ ಭಾಗ್ಯಸಹ ಕಮಲಳ ಸಂಗಡ ಬಂದು ಮನೆಯಲ್ಲಿಯೇ ಇದ್ದಾಗ, ಅವರ ಹರಟೆಯನ್ನು ಕಂಡ ನಾಗನಗೌಡರ ಮನಸ್ಸು ಬದಲಾವಣೆ ಆಯಿತು. ನನ್ನ ಮಗಳ ಈ ನಗುವನ್ನು ಕಂಡು ನಾನೆಷ್ಟು ವರ್ಷವಾಯ್ತಲ್ಲವೆ ? ವೈದ್ಯರ ಹೇಳಿಕೆಯ ಪ್ರಕಾರ ಔಷಧೋಪಚಾರ, ಊಟ ಹಾಗೂ ಇನ್ನಿತರ ಕೆಲಸಗಳನ್ನು ಎಷ್ಟೊಂದು ನಿಯಮಿತವಾಗಿ ಮಾಡುವಳು. ಅದರ ಜೊತೆಗೆ ತನ್ನ ತಾಯಿಯ ಆರೈಕೆಯನ್ನು ಸುಮಾರು ವರ್ಷಗಳಿಂದ ಮಾಡುತ್ತಲೇ ಬಂದಿದ್ದಾಳೆ.

ನಾಗನಗೌಡರಿಗೆ ರಕ್ತದ ಒತ್ತಡವು ನಿಯಮಿತವಾಗಿ ನಿಲ್ಲುತ್ತಿರಲಿಲ್ಲ ಒಂದೆರಡುದಿನ ಹೆಚ್ಚಾದರೆ, ಮತ್ತೆರಡುದಿನ ಕಡಿಮೆಯಾಗುತ್ತಿತ್ತು. ಸಾಮಾನ್ಯಗತಿಗೆ ಬಾರದೇ, ವೈದ್ಯರಿಗೂ ತಲೆನೋವಾಗಿ ಹೋಯಿತು.

ನಾಗನಗೌಡರ ಗೆಳೆಯರಾದ ರೇವಣ್ಣ, ಕುಮಾರಗೌಡರು, ಕರೀಮುಖಾನ್, ದೇಸಾಯಿರು ದಿನಕ್ಕೊಮ್ಮೆಯಾದರೂ ಬಂದು ಹೋಗುತ್ತಿದ್ದರು. ಆದರೆ ಕಮಲ ಅವರಿಗೆ ರಾಜಕೀಯದ ಬಗ್ಗೆ ಯಾವ ವಿಚಾರವನ್ನು ಎತ್ತಬಾರದೆಂದು ಹೇಳಿದ್ದರಿಂದ ಅದನ್ನು ಎತ್ತುತ್ತಿರಲಿಲ್ಲ. ತಂದೆಯ ಸಂಗಡ ಎಲ್ಲ ವ್ಯವಹಾರವನ್ನೇ ಕಳೆದು ಕೊಂಡ ಕಮಲ, ಮತ್ತೇ ಅದು ಬೆಸೆದುಕೊಂಡಿತು. ಆದರೆ ಮೊದಲಿನ ಸಿಹಿಯು ಬರಲಿಲ್ಲ. ತಾಯಿ ಶಾಂತಮ್ಮ ಮಗಳ ಈ ಸೇವೆಯನ್ನು ನೆನೆದು ಮರುಗಿದಳು. ಕಮಲಳು ಸುಮಾರು ಒಂದು ತಿಂಗಳಿಂದ ದಿನವಿಡೀ ಈರ್ವರ ಆರೈಕೆಯನ್ನು ಮಾಡಿದ ಫಲದಿಂದ ಈರ್ವರೂ ಗುಣಮುಖರಾದರೂ. ನೀನು ಅಷ್ಟೇಕೆ ದುಡಿತಿಯೇ ಕಮಲ, ನಾನು ಯಾರಿಗಾಗಿ ಬದುಕಬೇಕಾಗಿದೆ ಎಂದು ವ್ಯಥೆಯನ್ನು ಪಟ್ಟಾಗ, ನಿನ್ನಮಾತು ನಿಜಅಮ್ಮ, ಈ ಸಮಾಜದಲ್ಲಿ ಗಂಡಿಗಿರುವಷ್ಟು ಮರ್ಯಾದೆ ಹೆಣ್ಣಿಗಿಲ್ಲ, ತಂದೆ ಮಗಳ ಸಂಬಂಧ ಹೇಗಿದೆ ಎಂಬುದು, ನೀನು ತಿಳಿಯದವಳೇನಲ್ಲ. ಸುಮಾರು ಒಂದು ತಿಂಗಳಿಂದ ಅಪರ ಆರೈಕೆ ಮಾಡಿದರೂ ಒಂದು ಮಾತನ್ನೂ ಸಹ ಆಡಿಲ್ಲ. ನನಗೆ ಜೀವನದಲ್ಲಿ ಎಂದು ಬೇಜರಾಗ್ತದೆ ಹೇಳಮ್ಮ, ಅಂದೆ ಈರ್ವರೂ ಈ ಲೋಕದ ಹಂಗನ್ನು ತೊರೆದುಕೊಳ್ಳೋಣ, ಎಂದು ಕಮಲ ನುಡಿದಾಗ, ಹಾಗೆಲ್ಲ ನುಡಿಯಬೇಡ ಕಮಲ, ಈ ಮನೆಗೆ ಹೆಣ್ಣು ನೀನೇ ಗಂಡುನೀನೇ. ನನ್ನ ಯಾವ ಜನ್ಮದ ಕರ್ಮದ ಫಲದಿಂದಲೇ ಏನೋ ವಯಸ್ಕ ಮಕ್ಕಳನ್ನು ಕಳೆದುಕೊಂಡೆ. ನಿಮ್ಮ ತಂದೆಯು ಹಣದ ಹುಚ್ಚಿ ನನ್ನ ಮಕ್ಕಳನ್ನು ಆಹುತಿತೆಗೆದುಕೊಂಡಿತು. ವಯಸ್ಕ ಮಕ್ಕಳನ್ನು ಯಾವರೀತಿ ಕಾಣಬೇಕೆಂಬುದೇ ಅವರು ತಿಳಿಯಲಿಲ್ಲ. ಸುಮಾರು ಹತ್ತುವರ್ಷ-ಗಳಿಂದ ಅವರ ಒಂದು ಪ್ರೀತಿಯ ನುಡಿಯನ್ನೇ ಕೇಳಿಲ್ಲ. ಅದೆಲ್ಲವನ್ನು

ನಿಮ್ಮ ಮುಖನೋಡಿ ಸಹಿಸಿಕೊಂಡೆ. ನನ್ನನ್ನು ಅಗಲಿ ಒಂದಿನ ಸಹ ಇರುತ್ತಿರಲಿಲ್ಲ. ಆದರೆ ಇಂದು ಹಾಸಿಗೆ ಹಿಡಿದು ಸುಮಾರು ತಿಂಗಳುಗಳೇ ಕಳೆದರೂ ಒಂದು ಮಾತನ್ನೂ ಸಹ ಆಡಿಸಿಲ್ಲ. ಗಂಡನೇ ದೇವರೆಂದು ನಂಬಿ, ಹಡೆದ ತಂದೆ ತಾಯಿ ಮರೆತು ಕಿಂಚಿತ್ತೂ ಪರಿಚಯವಿರದ ಒಂದು ಗಂಡಸಿನ ಆಗುಹೋಗುಗಳಿಗೆ ಹೊಂದಿಕೊಂಡು, ಮನೆಯನ್ನು ಬೆಳಗುವ ನಂದಾದೀಪಗಳನ್ನು ನೀಡಿ, ಮನೆಯನ್ನು ನಂದಗೋಕುಲವನ್ನಾಗಿ ಮಾಡಿದ ಹೆಣ್ಣಿನ ಬಾಳುವೆ ಬಲು ತ್ಯಾಗ-ಮಯಿ. ಅಷ್ಟೇ ಹೊಲಸು ಕೂಡಾ. ಆದರಲ್ಲಿ ನನ್ನ ಜೀವನವಂತೂ ಬಾಳೆಯ ಎಲೆಯನ್ನು ತಂದು, ಸಿಂಗಾರಮಾಡಿ ಆದರಲ್ಲಿ ರುಚಿ ರುಚಿಯಾದ ಅಡಿಗೆ ಊಟಮಾಡಿ, ಅದನ್ನು ತಿಪ್ಪೆಗೆ ಎಸೆದಂತೆ ಆಗಿದೆ. ಈಗ ಈ ಜೀವ ಯಾರಿಗೂ ಬಾರದ ಎಲೆಯಮ್ಮ, ಹೀಗೆಯೇ ಒಂದು ದಿನ ಬಿದ್ದುಹೋಗುವದು ಎಂದು ನಿಟ್ಟುಸಿರನ್ನು ಬಿಡುವರು.

ತಾಯಿಯ ಮಾತನ್ನು ಕೇಳಿದ ಕಮಲಳಿಗೆ ದುಃಖ ಉಕ್ಕಿ ಬಂದಿತು. ಇನ್ನು ಬದುಕಿರುವವರೆಗೆ ಎಂಥೆಂಥಹ ಕಷ್ಟಗಳನ್ನು ಅನುಭವಿಸಬೇಕೋ ಯಾರಿಗೆಗೊತ್ತಮ್ಮ. ಈ ಹೊಲಸು ಸಮಾಜದಲ್ಲಿ ಗಂಡಿಗಿರುವಷ್ಟು ಮರ್ಯಾದೆ ಹೆಣ್ಣಿಗಿಲ್ಲ. ಗಂಡು ತಾನು ಮಾಡಿದ್ದೆಲ್ಲವೂ ಸರಿಯೆಂದೇ ತಿಳಿದಿರುತ್ತಾನೆ. ಆದರೆ ಕೆಲಸದಿಂದ ಯಾರಿಗೇನು ಪರಿಣಾ-ಮಗಳಾಗಿವೆ. ಎಂಬುದನ್ನು ಆತ ವಿಚಾರಿಸಲಾರ. ಆದರಲ್ಲಿ ಅಪ್ಪಾಜಿಯವರಂತೂ ನೂರಾರು ಜನರ ಆಸ್ತಿನುಂಗಿದ ಪಠಿಂಗರೇ ತಮ್ಮ ಪರಿವಾರವೆಂದರು. ಅನೀತಿ, ಅಧರ್ಮದ ಹಣ ಆದೆಷ್ಟು ಹೆಂಗಳೆಯರ ತಾಳಿಯನ್ನು ಹರಿದಿದ್ದೋ ಏನೋ ಎಂದು ನಿಟ್ಟುಸಿರು ಬಿಡುವಳು.

೪೩

ಈ ಅಧರ್ಮದ ಹಣದಿಂದ ನಾನು ಬದುಕಲಾರೆನಮ್ಮ. ನಗರವಲ್ಲಿ ಬ್ಯಾಂಕೊಂದರಲ್ಲಿ ಒಂದು ಹುದ್ದೆ ಕಾಲಿಯಿದೆಯಂತೆ ನಾನು ಕೆಲಸಕ್ಕೆ

ಸೇರುತ್ತೇನೆ ಎಂದು ನುಡಿದಾಗ, ಅದ್ಹೇಗೆ ಕಮಲ ನೀನು ಕೆಲಸಕ್ಕೆ ಸೇರುತ್ತೀಯಾ ಎಂದು ಶಾಂತಮ್ಮನವರು ಕೇಳಲು, ಈಗ ನಾನು ಸೇರಲೇ ಬೇಕಮ್ಮ, ಇಲ್ಲಿಯವರೆಗೆ ಗೋಪಣ್ಣ ದುಡಿದ ಹಣದಿಂದ ಜೀವನವನ್ನು ಸಾಗಿಸಿದೆ; ಅದು ಕೂಡಾ ತೀರಲಿಕ್ಕೆ ಬಂದಿದೆ, ಕೂತುಉಂಡರೆ ಕುಡಿಕೆ ಹೊನ್ನು ಸಾಲದಮ್ಮ ಎಂದು ಕಮಲ ನುಡಿದಾಗ, ನೀನು ಕೆಲಸಕ್ಕೆ ಸೇರಿದರೆ ನಿನ್ನ ತಂದೆ ನಿನ್ನ ಸುಮ್ಮನೆ ಬಿಡುವರೇನಮ್ಮ ಎಂದು ಶಾಂತಮ್ಮ ಸಂಕಟಪಡಲು, ನನ್ನನ್ನು ಕೊಂದುಹಾಕಿದರೆ ಇನ್ನು ಒಳ್ಳೆಯದಾಯ್ತಲ್ಲಮ್ಮ, ಜೀವಂತವಾಗಿದ್ದು ಮನಸ್ಸಿಗೆ ಬಂದ ಹಾಗೆ ನ್ಯಾಯದಿಂದ ನಡೆಯಲು ನನಗೆ ಸಾಧ್ಯವಾಗದಾದಾಗ ಬೇರೆ ದಾರಿಯೇನೆ ಇಲ್ಲವಲ್ಲಮ್ಮ ಎಂದು ಕಮಲ ನುಡಿದಳು.

ಹಾಗೆಲ್ಲ ನುಡಿಯಬೇಡ ಕಮಲ ನನಗೆ ತಡೆದುಕೊಳ್ಳುವ ಶಕ್ತಿ ನನ್ನಲ್ಲಿಲ್ಲಮ್ಮ, ಆದಷ್ಟು ಬೇಗನೆ ಮದುವೆಮಾಡಿ ನಾನು ಈ ಲೋಕದಿಂದ ಹೋಗಿಬಿಡುತ್ತೇನೆ. ಆ ಒಂದು ಆಶೆಯಿಂದಲೇ ನಾನು ಬದುಕಿರುವದು ಕಮಲ ಎಂದು ಶಾಂತಮ್ಮ ದುಃಖದಿಂದ ನುಡಿದಾಗ, ಮದುವೆ ! ನನಗೆ ! ನಿನಗೆಲ್ಲೋ ಭ್ರಾಂತಿ ಅಮ್ಮಾ, ಅದೆಲ್ಲ ನಿನ್ನ ಕನಸೆಂತ ತಿಳಿದುಕೊಳ್ಳಮ್ಮ ನನ್ನ ಮದುವೆ ಈ ಜನ್ಮದಲ್ಲಿ ಆಗುವದಿಲ್ಲಮ್ಮ ಎಂದು ಕಮಲ ನುಡಿದಾಗ, ಹಾಗೆಲ್ಲ ನುಡಿಯಬೇಡ ಕಮಲ ನನ್ನ ಈ ಒಂದು ಆಶೆಯನ್ನು ನಿರಾಕರಿಸಬೇಡಮ್ಮ ಎಂದು ಶಾಂತಮ್ಮ ಕಳಕಳಿಯಿಂದ ಕೇಳಿಕೊಂಡಾಗ, ಅಮ್ಮಾ ನಾನು ಮದುವೆಯಾದರೆ ಮಧುಕರನನ್ನೇ, ಅವನು ನನ್ನನ್ನು ಒಪ್ಪುವನೋ ಬಿಡುವನೋ ಆಮಾತು ಬೇರೆ, ಆತನು ಒಪ್ಪದೇ ಹೋದಲ್ಲಿ ನಾನು ಆಜನ್ಮ ಬ್ರಹ್ಮಚಾರಿಣಿಯಾಗಿ ಇರುವದಂತೂ ನಿಜ. ಹೀಗಿರುವಾಗ ನನ್ನ ಮದುವೆ ಆಗುವದು ಎಂಬುದು ಕನಸಲ್ಲವೆ. ಅದಲ್ಲದೆ ಅಪ್ಪಾಜಿ ಮಧುಕರ, ಹಾವು ಮುಂಗಸಿ ತರಹ ಇರುವರು. ಅಪ್ಪಾಜಿ ಮಧುಕರನ ತಂದೆಯನ್ನು ಕೊಂದರು, ಸೋದರಮಾವನ ಸಂಸಾರವನ್ನೇ ಬಸ್ಮಮಾಡಿ-ಸಿದರು. ಇವರು ಮಾಡುವ ಹೀನಕೃತ್ಯಗಳನ್ನು ಅಲ್ಲಗಳೆದು ಮನುಷ್ಯರಾಗಿ

ಬದುಕಿರಿ ಎಂದು ಬುದ್ಧಿವಾದ ಹೇಳಿದ ಅವನ ಪರಿವಾರವನ್ನೇ ಬಸ್ಕ್ವಮಾಡಿದರು.

ಇವರು ಮಾಡಿದ ಈ ಪಾಪದ ಕೃತ್ಯಕ್ಕೆ ವಿಧಿ ಗೋಪಣ್ಣನನ್ನು ಬಲಿತೆಗೆದುಕೊಂಡಿತು. ಅದನ್ನರಿತಾದರೂ ಇವರು ಮಾನವರಾಗಬೇಕಿತ್ತು, ಮತ್ತೆ ಅದೇ ರೀತಿ ಮುಂದುವರಿದಾಗ ದೀಪಕನನ್ನು ಬಲಿತೆಗೆದು-ಕೊಂಡಿತು. ಇನ್ನು ಸರದಿ ನನ್ನ ನಿನ್ನದಮ್ಮ. ಒಡಹುಟ್ಟಿದವರನ್ನು ಕಳೆದುಕೊಂಡು ನಾನು ಅದ್ಹೇಗೆ ಸುಖದಿಂದ ಬದುಕಲಮ್ಮ, ಅದಕ್ಕೇ ನೌಕರಿಯ ನೆವದಲ್ಲಿ ಸತ್ತುಹೋಗುವದು ಎಂದು ಕಮಲ ನುಡಿದಾಗ, ಹಾಗೆಲ್ಲ ಮಾಡಬೇಡ ಕಮಲ ಎಂದು ಶಾಂತಮ್ಮ ಅಳಲು ಪ್ರಾರಂಭಿಸುವರು. ಈಗ ಸುಮ್ಮನಿರಮ್ಮ ಮುಂದೆ ಪ್ರಸಂಗ ಬಂದಾಗ ನೋಡಿದರಾಯ್ತು. ಬಾ ಅಮ್ಮಾ ಊಟ ಮಾಡೋಣ, ನೀನು ಮುಖ ತೊಳೆದುಕೊಂಡುಬಾ, ನಾನು ಅಪ್ಪಾಜಿ ಎದ್ದಿದ್ದಾರೇನೋ ನೋಡತೀನಿ ಎಂದು ತಾಯಿಯರೂಮಿನಿಂದ ಹೊರಗೆ ಬರಲು, ನಾಗನಗೌಡರು ನಿಂತಿದ್ದನ್ನು ಕಂಡ ಕಮಲ, ಯಾಕಪ್ಪಾಜಿ ಇಲ್ಲಿಗೆ ಬಂದ್ರಿ ಈಗ ಅಲ್ಲಿಗೇನೆ ಹೊರಟಿದ್ದೆ. ಅಮ್ಮನ ಸಂಗಡ ಮಾತನಾಡತಾಯಿದ್ದೆ ನಿಮ್ಮ ಊಟಕ್ಕೆ ಇನ್ನು ಸಮಯ ಆಗಿಲ್ಲಾಂತ ನಿಂತಿದ್ದೆ ಎಂದು ಕಮಲ ನಿದಾನವಾಗಿ ನುಡಿದಳು.

ಯಾಕ್ರಿ ಕಣ್ಣಲ್ಲಿ ನೀರು. ಮುಖವೇಕೆ ಚಿಕ್ಕದಾಗಿದೆ ಎಂದು ಪತ್ನಿಯು ಕೇಳಿದಾಗ, ಗೌಡರಿಗೆ ಅತೀವ ಸಂಕಟವಾಯಿತು. ಸುಮಾರು ದಿನಗಳಿಂದ ಹಾಸಿಗೆ ಹಿಡಿದರೂ ನಾನು ಕಣ್ಣೆತ್ತಿ ನೋಡಿರಲಿಲ್ಲ. ದಿನಾಲು ನಾನು ಮಾತನಾಡಿಸದಿದ್ದರೂ ಮಾತನಾಡಿಸಿ ಊಟ ಉಪಚಾರವನ್ನು ವಿಚಾರಿಸಿಸುತ್ತಿದ್ದಳು. ನಾನು ಅದೆಷ್ಟುಸಲ ಹಿಯಾಳಿ-ಸಿದರೂ ಗಮನ ಕೊಡುತ್ತಿರಲಿಲ್ಲ. ಹೆಣ್ಣಿಗೆ ನನ್ನಂಥಹ ನೀಚರ ಹೀನಕೃತ್ಯಗಳನ್ನು ಸಹಿಸಿಕೊಳ್ಳುವ ಸಲುವಾಗಿಯೇ ತಾಳ್ಮೆ, ಸಹನತೆ-ಗಳೆರಡನ್ನು ಕೊಟ್ಟಿರಬೇಕೆಂದು ವಿಚಾರಮಾಡಿ, ದೊಡ್ಡದಾದ ಉಸಿರನ್ನು ಬಿಟ್ಟು. ಯಾಕಿಲ್ಲ ಶಾಂತಾ ಸುಮ್ಮನೆ ಎಂದು ಕಣ್ಣೀರನ್ನು ಒರಸಿಕೊಂಡು,

ಕಮಲ ನೀನು ಚಿಕ್ಕವಳಾದರೂ ಬುದ್ಧಿವಂತೆಯಮ್ಮ. ವಿಶಾಲ-ಮನೋಭಾವನೆಯನ್ನು ಹೊಂದಿರುವವಳು. ನನ್ನಲ್ಲಿ ಅಂಟಿಕೊಂಡಿದ್ದ ಹಣದ ಪಿಶಾಚಿಯನ್ನು ಇಂದು ಒದ್ದೋಡಿಸಿದೆ. ಮಾನವೀಯತೆಯನ್ನು ಕಳೆದುಕೊಂಡು, ಮಾನವಕುಲದ ಪಶುವಾದ ನನ್ನನ್ನು ಕ್ಷಮಿಸಮ್ಮ; ಅದಕ್ಕಾಗಿ ನೀನು ಏನು ಶಿಕ್ಷೆಕೊಟ್ಟರೂ ಸ್ವೀಕರಿಸುವೆನಮ್ಮ ಎಂದು ಕಮಲಳ ಎರಡು ಕೈಗಳನ್ನು ಹಿಡಿದು ಕೇಳುವರು.

ತಂದೆಯ ಈ ಪರಿವರ್ತನೆಯನ್ನು ಕಂಡ ಕಮಲ ಹರ್ಷಗೊಂಡಳು. ಅಪ್ಪಾಜಿ ಎಂದು ತಬ್ಬಿಕೊಳ್ಳುವಳು. ನ್ಯಾಯದ ಹಾದಿಯತ್ತ ನಡೆದು ಜನತೆಯ ಪ್ರೀತಿಗೆ ಪಾತ್ರನಾದ ಗೋಪಾಲನನ್ನು ಕಳೆದುಕೊಂಡೆ, ಆತನ ಅವನತಿಗೆ ನಾನೇ ಕಾರಣನಾದೆ. ತಪ್ಪುಹಾದಿಯಲ್ಲಿ ದೀಪಕ ಹೋಗುತ್ತಿರುವಾಗ, ಅವನಿಗೆ ಬುದ್ಧಿವಾದ ಹೇಳಲು ಬಂದ ಗೋಪಿಗೆ ಹೀಯಾಳಿಸಿ, ಕ್ಷುಲಕನನ್ನಾಗಿ ಭಾವಿಸಿದೆ. ಕೊನೆಯವರೆಗೂ ನ್ಯಾಯ ನಿಷ್ಟೆಯಿಂದ ಹೋರಾಡಿ, ಈ ನೀಚ ತಂದೆಯ ಬಲೆಯಲ್ಲಿ ಬೆಂದು ಭಸ್ಮವಾದೆಯಾ ಕಂದಾ, ಗೋಪೀ ನನ್ನನ್ನು ಕ್ಷಮಿಸಪ್ಪ, ನಾನು ದ್ರೋಹಿ, ವಂಚಕ, ನನಗೆ ಸರಿಯಾದ ಶಿಕ್ಷೆಯಾಗಲೇ ಬೇಕಲ್ಲವೆ ಗೋಪಿ, ಹೌದು ಶಿಕ್ಷೆಯಾಗಲೇಬೇಕು ಎಂದು ಅಳುತ್ತ ಮಡದಿ-ಯನ್ನು ಅಪ್ಪಿಕೊಂಡು ಅಳುವರು. ನಿನ್ನಂಥಹ ಸದ್ಗುಣಿಯನ್ನು ಕಡೆಗಾಣಿಸಿದೆ. ನಾನು ಮಾಡಿದ ಪಾಪಗಳು ಒಂದೇ ಎರಡೇ, ಮಧುಕರನನ್ನು ತಬ್ಬಲಿಯನ್ನಾಗಿ ಮಾಡಿದೆ.

ಮಧು ನಾನು ನಿನಗೆಷ್ಟು ರೀತಿಯಿಂದ ತೊಂದರೆಗಳನ್ನು ಕೊಟ್ಟರೂ, ನನ್ನ ಮಾತನ್ನು ಕೊನೆಯವರೆಗೂ ಉಳಿಸಿದೆಯಲ್ಲೋ ಮಗು, ಅಂದು ನೀನು ಮನೆಯವರೆಗೆ ಬಂದಾಗ, ನನ್ನ ದುಷ್ಟ-ಕೂಟವೆಲ್ಲ ಸೇರಿಕೊಂಡು, ಅವಮಾನ ಮಾಡಿದೆನಲ್ಲ, ಮಾನವತಾವಾದಿಯಾದ ನೀನು ನನ್ನ ಮಗಳ ಸ್ನೇಹದಲ್ಲಿ ಕಿಂಚಿತ್ತಾದರೂ ದ್ರೋಹ ಬಗೆದದ್ದೇ ಆದರೆ, ನಿನ್ನಂಥ ಸಮಾಜದ್ರೋಹಿ ಯಾರೂ ಅಲ್ಲ ನೀನೇ ಎಂದು ಹೇಳಿದ್ದಕ್ಕೆ, ಯಜಮಾನರೇ, ನಿಮ್ಮ ಮಗಳು ಸ್ನೇಹಿತಳು

ಮಾತ್ರ, ಏನಾದರೂ ನಾನವಳಿಗೆ ದ್ರೋಹ ಬಗೆದರೆ ಸಾಯುವವರೆಗೂ ನಿಮ್ಮ ಅಡಿಯಾಳಾಗಿ ದುಡಿಯುವೆನೆಂದು ಹೇಳಿದ ನುಡಿಗಳು ಇನ್ನೂ ಕಿವಿಯಲ್ಲಿ ಉಳಿದು, ಮನಕ್ಕೆ ಒತ್ತೊತ್ತಿ ಹೇಳುತ್ತಿವೆ. ಮಧು ನೀನು ಗೆದ್ದೆ ನಾನು ಸೋತೆ, ನೀನು ಅಸಾದಾರಣ ವ್ಯಕ್ತಿತ್ವವುಳ್ಳವನು. ನಿನ್ನೆದುರು ನಾನು ಕ್ಷುಲ್ಲಕನಾದೆ ಎಂದು ಬಹಳ ದುಃಖದಿಂದ ಹೇಳುವರು.

೪೪

ನಾಗನಗೌಡರು ವಿಚಾರಮಾಡುತ್ತ ಕುಳಿತಾಗ ಕಮಲ ಹೊರಗಿನಿಂದ ಬರುವಳು. ಕಮಲ ನನಗೆ ಈ ಜೀವನ ಸಾಕಮ್ಮ. ನಾನು ಬದುಕಲು ಇಚ್ಛೆಪಡುವದಿಲ್ಲ. ಈ ಎಲ್ಲ ಆಸ್ತಿಯನ್ನು ನಿನ್ನ ಹೆಸರಿಗೆ ಬರೆಯುವೆ. ಅದು ನಿನ್ನ ಮನಸ್ಸಿಗೆ ಬಂದಹಾಗೆ ಆದನ್ನು ಉಪಯೋಗಿಸಬಹುದು. ಈ ಪಾಪದ ಆಸ್ತಿಯು ನಿನಗೆ ಬೇಡವೆಂದರೆ, ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡಮ್ಮ ನನ್ನದೇನು ಅಭ್ಯಂತರ ಇಲ್ಲ. ಎಂದು ನುಡಿದು, ವಕೀಲರಿಗೆ ಫೋನುಮಾಡಿ, ನನ್ನ ಆಸ್ತಿಯನ್ನು ಕಮಲಳಿಗೆ ಬರೆದು ತನ್ನಿ ನಾನು ಸಹಿಮಾಡುವೆ, ಆದಷ್ಟು ಬೇಗಬನ್ನಿರಿ ಎಂದು ಹೇಳಿ ತಮ್ಮ ರೂಮಿಗೆ ಹೋಗುವರು.

ಅವರ ಹಿಂದೆ ಹೋದ ಕಮಲ, ನಾಗನಗೌಡರು ರಿವಾಲ್ವರನ್ನು ತೆಗೆದು ಅದರಲ್ಲಿ ಗೋಲಿಗಳನ್ನು ತುಂಬುತ್ತಿದ್ದರು. ಅದನ್ನು ಕಂಡ ಕಮಲ ಕೆಳಗಿಳಿದು ಬಂದು ತಾಯಿಯ ಕಿವಿಯಲ್ಲಿ ಏನೋ ಹೇಳಿ, ಅಮ್ಮಾ ಎಂದು ಚೀರುತ್ತ ಕೆಳಗೆ ಬೀಳುವಳು. ಕಮಲಳ ಧ್ವನಿಕೇಳಿ ಗೌಡರು ದಾವಿಸಿ ಬಂದು, ಕಮಲಳನ್ನು ಎತ್ತಲು ಹೋಗುವರು. ಕಮಲ ಅವರ ಜೇಬಿನಲ್ಲಿಯ ರಿವಾಲ್ವರನ್ನು ತೆಗೆಧುಕೊಂಡು ಎದ್ದು ನಿಂತು, ಯಾಕಪ್ಪಾ ಇದರಲ್ಲಿ ಗೋಲಿ ತುಂಬಿದಿರಿ. ನಮ್ಮನ್ನು ಅಗಲಿ ಹೋಗುವಿರಾ, ಹಾಗಿದ್ದರೆ ಮೊದಲು ನಾವು ಹೋಗುವೆವು ಎಂದು

ಶಿವಾಲ್ಯರನ್ನು ತನ್ನತಲೆಗೆ ಹಿಡಿಯಲು, ಬೇಡಮ್ಮ ಕಮಲ ನನ್ನಿಂದ ತಪ್ಪಾಯ್ತು, ನಾನು ಹಾಗೆ ಮಾಡೊಲ್ಲ ಎನ್ನಲು, ಲೇ ಕಮಲ ಅದರ ಸಂಗಡ ಹುಡುಗಾಟ ಆಡತೀಯೇನೆ ದೂರ ಎಸಿದು ಬಿಡು ಅದನ್ನು ಎಂದು ಶಾಂತಮ್ಮ ಗದರಿ ಯಾಕ್ರಿ ನೀವು ಹೀಗೆಲ್ಲ ಮಾಡತೀರಿ. ನೀವು ಹೋದರೆ ನಾನೇಕೆ ಬದುಕಿರಬೇಕು ಈ ಭೂಮಿಯಮೇಲೆ, ವಂಶದ ಕುಡಿಗಳನ್ನೆ ಕಳೆದುಕೊಂಡು ನಿಮ್ಮ ಮುಖ ನೋಡುತ್ತ ಬದುಕಿದಿನಿ ಎಂದು ಅಳಲು ಪ್ರಾರಂಭಿಸುವರು. ಅಷ್ಟರಲ್ಲಿ ನಾಗನಗೌಡರು ಹೆಂಡತಿಯನ್ನು ಸಮಾದಾನ ಪಡಿಸುವರು. ಈ ಘಟನೆ ಕೊಂದು

ಅಷ್ಟರಲ್ಲಿ ಎಲ್ಲಿದ್ದಿಯೋ ನಾಗನಗೌಡ ಎಂದು ಕಾರಿನ ಚಾಲ್ಕ ಪ್ರಭಾಕರ ಕೂಗಲು, ಯಾರು ನೀನು ಮುಖವಾಡವೇಕೆ ಹಾಕಿದ್ದಿಯಾ ನನ್ನಿಂದ ನಿನಗೇನಾಗಬೇಕಾಗಿದೆ ಎಂದು ಗೌಡರು ಕೇಳಲು, ಲೇ ಬೇವಕೊಪ, ನಾನು ಯಾರೆಂಬುದು ನಮಗೇ ಗೊತ್ತಿಲ್ಲ ಇನ್ನು ನಿನಗೇನು ಹೇಳಬೇಕು ಎಂದು ಗಹಗಹಿಸಿ ನಗುವರು. ನನ್ನಿಂದ ನಿಮಗೇನಾಗಬೇಕೆಂದು ಗೌಡರು ಕೇಳಲು, ನಮಗೆ ನಿನ್ನ ಪ್ರಾಣಬೇಕಾಗಿದೆ. ನನ್ನ ಅಂಗಾಂಗಗಳನ್ನು ಬಸ್ಮಮಾಡಿದವರಲ್ಲಿ ನೀನೂ ಒಬ್ಬ. ನಿನ್ನ ಸಂಗಾತಿಗಳನ್ನು ಮುಗಿಸಿ ಬಂದಿದ್ದೇವೆ. ನಿನ್ನದೇ ಕೊನೆಯ ಸರದಿ, ಹೇಳು ಸಂಗಪ್ಪ ಮಾಸ್ತರರನ್ನು ಮಧುಕರನ ಬಂಧುಗಳನ್ನು, ಮುಸ್ರಣಾಲಯದಲ್ಲಿ ಬೂದಿಯಾದ ನನ್ನ ಅಂಗಾಂಗಗಳನ್ನು ಬಸ್ಮಮಾಡಲು, ನಿನ್ನ ಕೈವಾಡಯಿತ್ತೋ ಇಲ್ಲಪ್ಪೋ ಎಂದು ಪ್ರಬಾಕರ ಕೇಳಲು, ಹೌದು ಇವಕ್ಕೆಲ್ಲ ಮುಖ್ಯ ಕಾರಣ ನಾನೇ ಎಂದು ಗೌಡರು ನುಡಿದಾಗ, ಹಾಗಾದರೆ ಹೇಳು ನಿನ್ನ ಕೊನೆಯ ಆಶೆಯೇನು ಎಂದು ಪ್ರಭಾಕರ ಕೇಳಿದಾಗ, ಗೌಡರು ಅತ್ಯಾನಂದದಿಂದ ನನ್ನನ್ನು ಆದಷ್ಟು ಬೇಗನೆ ನನ್ನ ಮಗ ಗೋಪಿಯ ಹತ್ತಿರ ಕಳಿಸಿರಿ ಎಂದು ಗೌಡರು ನುಡಿಯಲು, ಬೇಡ ಬೇಡ ಅವರನ್ನು ಏನೂ ಮಾಡಬೇಡಿ ನನ್ನನ್ನು ಕೊಂದು ಬಿಡಿ ಅವರೀಗ ಹೊಸ ಮನುಷ್ಯರಾಗಿದ್ದಾರೆ. ಅವರಿಗೆ ತಮ್ಮ ತಪ್ಪಿನ ಅರಿವು ಸಂಪೂರ್ಣ ಆಗಿದೆ. ಅವರನ್ನು ಏನೂ ಮಾಡಬೇಡಿ ಎಂದು ಶಾಂತಮ್ಮ ಗೌಡರನ್ನು ತಬ್ಬಿಕೊಳ್ಳುವರು.

ಪ್ರಭಾಕರ ನೀನು ತುಳಿಯುತ್ತಿರುವ ಮಾರ್ಗ ಅತೀಹೀನವಾದದ್ದು, ನಮ್ಮ ಪಕ್ಷಕ್ಕೇ ನನ್ನ ಸಂಘಕ್ಕೇನೇ ಕೆಟ್ಟ ಹೆಸರು ಬರುವಂತಹದ್ದು, ಮಾನವತಾವಾದವನ್ನು ಹೇಳಿಕೊಡುವಂತಹ ನೀನೇ ಹೀಗೆ ವರ್ತಿಸಿದರೆ ಹೇಗೆ ? ಮಾನವನ ಪರಿಶುದ್ಧವಾದ ಆತ್ಮವನ್ನು ಗೌರವಿಸುವವರಾದ ನಾವು ಹೀಗೆ ವರ್ತಿಸಿದರೆ ಹೇಗೆ ? ದಯವಿಟ್ಟು ಶಾಂತತೆಯಿಂದ ವರ್ತಿಸಿರಿ ಎಂದು ಕಮಲ ನುಡಿಯಲು. ಅದೆಲ್ಲ ನಮಗೆ ಗೊತ್ತಿದೆ ಸಂಗಾತಿ, ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು. ನೂರಾರು ಜನರನ್ನು ಮಾಡಿದ ಈ ನೀಚರನ್ನು ಬದುಕಲು ಬಿಟ್ಟರೆ, ಸಮಾಜ ಮತ್ತಷ್ಟು ುವದು. ಈ ಸಮಾಜದ ಸುಧಾರಣೆಯನ್ನು ಬಯಸಿ ಹಗಲಿರುಳು ಹೋರಾಡುತ್ತಿದ್ದವರನ್ನು, ನಾಶಮಾಡಿದ ಈ ನೀಚನನ್ನು ಮುಗಿಸಿಯೇ ಬಿಡಬೇಕು. ಇಂಥಹ ಕ್ರೂರಮೃಗಳನ್ನು ನಾಶಮಾಡಿದಾಗಲೇ ನಮ್ಮ ಕೆಲಸಗಳು ಸುಗಮವಾಗಿ ಸಾಗುವವು ಎಂದು ಪ್ರಭಾಕರ ಹೇಳಿದಾಗ, ಬೇಡ ಪ್ರಭಾಕರ ಹಿಂಸೆ ನಮ್ಮ ಧರ್ಮವಲ್ಲ. ಅವರ ಮನದಲ್ಲಿಯ ನೀಚಬುದ್ಧಿಯನ್ನು ಹೋಗಲಾಡಿಸಿ, ಅವರನ್ನು ಪರಿಶುದ್ಧವಾದ ಹೃದಯದವರನ್ನಾಗಿ ಮಾಡುವದೇ ನಮ್ಮ ಮುಖ್ಯಗುರಿ ಎಂಬುದನ್ನು ಮರೆಯಬೇಡ, ದಯವಿಟ್ಟು ನೀವು ತಪ್ಪು ದಾರಿಯಲ್ಲಿ ಹೋಗಬೇಡಿರಿ. ನಿಮ್ಮಂಥಹ ಸಕ್ರೀಯ ಕಾರ್ಯಕರ್ತರೇ ತಪ್ಪುದಾರಿ ತುಳಿದರೆ ನಿಮ್ಮ ನಾಯಕರ ಹೆಸರು ಹಾಳಾಗುವದಿಲ್ಲವೆ ? ನಿಮ್ಮ ನಾಯಕರ ಮನಸ್ಸನ್ನು ನೋಯಿಸುವ ಇಚ್ಛೆ ನಿನಗಾಗಿದೆಯೇ ಎಂದು ಕಮಲ ಕೇಳಿದಾಗ, ನಮಗೀಗ ಬೇಕಾಗಿರುವದು ಗೌಡರ ಪ್ರಾಣ, ನಮ್ಮಗಳ ಪ್ರಾಣಗಳ ಸಂಗಡ ಚಲ್ಲಾಟವಾಡಿದವರ ಮೇಲೆ ಸೇಡು, ಅಂದಾಗಲೇ ನಮಗೆ ತೃಪ್ತಿ, ಗೌಡಾ ಇದೋ ಅನುಭವಿಸು, ಎಂದು ತನ್ನ ಕೈಯಲ್ಲಿಯ ಚೂರಿಯನ್ನು ಎಸೆಯಲು, ಕಮಲಳು ತನ್ನ ಕೈಯಲ್ಲಿರುವ ರಿವಾಲ್ವರನ್ನು ಎಸೆಯಲು, ಆ ಚೂರಿಯು ಕೆಳಗೆ ಬೀಳುವದು. ಅಷ್ಟರಲ್ಲಿ ಪ್ರಭಾ ಎಂದು ಕೂಗುತ್ತ ಒಳಗೆ ಬರುತ್ತಿದ್ದ ರಾಮುನ ತಲೆಗೆ ಬಡಿಯುವದು, ಅಮ್ಮಾ ಎಂದು ಚೀರುತ್ತ ರಾಮು ಬೀಳುವನು.

ಮೂವರೂ ರಾಮುನನ್ನು ಅಪ್ಪಿಕೊಳ್ಳುವರು. ನಂತರ ಈ ಘಟನೆ

ಯನ್ನರಿತ ಪ್ರಭಾಕರ ರಾಮುsss ಎಂದು ಓಡಿಬರುವಾಗ ಕಾಲಲ್ಲಿ ಬಿದ್ದ ಚೂರಿಗೆ ಎಡವಿ ಬೀಳುವನು. ಆತನೂ ಅಮ್ಮಾ ಎಂದು ಅರಚುತ್ತ ಬೀಳುವನು. ಆತನ ಹಿಂದೆ ಮತ್ತೊಬ್ಬನು ಬರಲು ಅವನೂ ಪ್ರಭಾಕರನಿಗೆ ಎಡವಿ ಬಿದ್ದಾಗ, ಆತನಿಗೂ ಚೂರಿಯು ನೆಟ್ಟಿತು ಈರ್ವರೂ ನೆಲಕ್ಕೆ ಉರುಳಿದರು. ಹೇ ಸಂಗಾತಿ ರಾಮು ನನ್ನನ್ನು ಕ್ಷಮಿಸು ಎಂದು ಹೊರಳಾಡಿದರು. ಒಂದೈದು ನಿಮಿಷದಲ್ಲಿ ಅವರ ಮೈಯೆಲ್ಲ ಹಸಿರಾಗಿತ್ತು. ಇತ್ತ ಗಾಯಗೊಂಡ ರಾಮುಗೆ ಎಚ್ಚರವಾಗುವದರೊಳಗಾಗಿ ಈ ಘಟನೆ ನಡೆದು ಹೋಗಿತ್ತು. ಎಲ್ಲರನ್ನು ಈ ದುರ್ಘಟನೆಯಿಂದ ಉಳಿಸಬೇಕೆಂದು ಧಾವಿಸಿ ಬಂದ ರಾಮುಗೆ ಬಹಳ ನಿರಾಶೆಯಾಯಿತು. ನಾಗನಗೌಡರು ರಾಮುವನ್ನು ತಬ್ಬಿಕೊಂಡು ಕ್ಷಮಿಸಬೇಕೆಂದು ಕೇಳುವರು ಅಷ್ಟರಲ್ಲಿ ವಕೀಲರು ಬರುವರು. ನಂತರ ಗೌಡರು ರಾಮು ಸೇರಿ ಪೋಲಿಸರಿಗೆ ಫೋನು ಮಾಡಿದರು. ಪೋಲಿಸರು ಬಂದ ನಂತರ ಆ ಕತ್ತಿಯನ್ನು ತೆಗೆದು ಅದರ ಮೇಲಿರುವ ನಾಗಗುರುತನ್ನು ವೈದ್ಯರು ಪೋಲಿಸರಿಗೂ, ಗೌಡರಿಗೂ ತೋರಿಸಲು ಗೌಡರಿಗೆ ನಾಗ್ ಗುರುತಿರುವ ಜನರ ಪರಿಚಯವಿದ್ದುದರಿಂದ ಆ ರೌಡಿಗಳ ಸ್ಥಳವನ್ನು ಹೇಳಿದರು. ಅಲ್ಲದೆ ಅವರಿಗೂ ತಮಗಿರುವ ಸಂಬಂಧವನ್ನು ಹೇಳಿದಾಗ, ನಾವು ಕರೆದಾಗ ನೀವು ಬರಬೇಕೆಂದು ಹೇಳಿ ಪೋಲಿಸರು, ವೈದ್ಯರು ಹೋದರು.

೪೫

ನಗರದಲ್ಲಿ ಅಂದು ನಗರದ ಪ್ರಮುಖರ ಕೊಲೆಯು ಒಂದೇ ವಿಧದಿಂದ ನಡೆದುಹೋಗಿತ್ತು. ಎಲ್ಲ ಕೊಲೆಗಳು ನಾಗ್ ಗುರುತಿನ ಚೂರಿಯಿಂದ ಮಾಡಿದ್ದರು. ನಗರದಲ್ಲಿ ಒಂದು ರೀತಿಯಿಂದ ರಕ್ತ-ಕ್ರಾಂತಿಯಾದಂತೆ ಭಾಸವಾಗುತ್ತಿತ್ತು. ಕುಮಾರಗೌಡರು ಈ ಚೂರಿಗೆ ಬಲಿಯಾಗದೇ ಇದ್ದಾಗ, ಬಲವಾದ ಕಲ್ಲೊಂದನ್ನು ಅವರ ತಲೆಯ ಮೇಲೆ ಹಾಕಿದ್ದರು. ಅಲ್ಲದೆ ಸಣ್ಣ ಪುಟ್ಟ ಹೊಡೆತಗಳು ಸಹ ಅವರನ್ನು

ಗಾಯಗೊಳಿಸಿದ್ದವು. ಅವರಿಗೆ ರಾಜಧಾನಿಯಿಂದ ಹೆಸರಾಂತ ವೈದ್ಯರನ್ನು ಬರಮಾಡಿದರು. ವೈದ್ಯರೂ ಸಹ ಸತತವಾಗಿ ನಾಲ್ಕು ದಿನಗಳವರೆಗೆ ಸಾವಿನ ಸಂಗಡ ಹೋರಾಟ ಮಾಡಿದರು. ತಮ್ಮ ಯೋಗಕ್ಷೇಮ-ವಿಚಾರಿಸಲು ಬರುತ್ತಿದ್ದ ರಾಮುನ ಬಳಗವನ್ನು ಕಂಡು ಗೌಡರು ಸಂತಸಪಟ್ಟರು. ಈ ಯುವಪೀಳಿಗೆ ರಾಮುನ ತಂದೆಯೆಂದು ಬರುವರೇ ಹೊರತು ಕುಮಾರಗೌಡರೆಂದು ಬರುತ್ತಿಲ್ಲವೆಂದು ಗೌಡರಿಗೂ ಅರ್ಥವಾ-ಗಿತ್ತು. ಗೌಡರಿಗೆ ತಮ್ಮ ತಪ್ಪಿನ ಅರಿವಾಯಿತು. ರಾಮುನ ಹಾದಿ ನ್ಯಾಯವಾದದ್ದು ನ್ಯಾಯಕ್ಕೆ ಎಂದಿದ್ದರೂ ಜಯವಿದ್ದೆ ಇದೆಯೆಂದು ತಿಳಿದರು. ರಾಮುವನ್ನು ಹಾಗೂ ಭಾಗ್ಯಳನ್ನು ಕರೆದು ತನ್ನೆರಡು ಕೈಗಳಿಂದ ಅವರಿರ್ವರ ಕೈಗಳನ್ನು ಚುಂಬಿಸಿ ಮಧುಕರನ ಕೈಯಲ್ಲಿ ಕೊಟ್ಟರು. ಅದನ್ನರಿತ ಮಧುಕರ ಇವರಿಬ್ಬರೂ ನನ್ನ ಕಣ್ಣುಗಳೆಂದು ಸನ್ನೆಯಿಂದ ಹೇಳಲು. ಆನಂದದಿಂದ ಗೌಡರು ತಮ್ಮ ಈ ಲೋಕದ ಹಂಗನ್ನು ತೊರೆದು ಹೊರಟುಹೋದರು. ನಾಗನಗೌಡರು ಎಲ್ಲವನ್ನು ಮೂಕರಾಗಿ ನೋಡುತ್ತಿದ್ದರು. ಎಲ್ಲರೂ ಸೇರಿ ಎಲ್ಲರ ಅಂತಿಮಕ್ರಿಯೆ-ಯನ್ನು ಮಾಡಿ ಮುಗಿಸಿದರು.

ನಗರದ ವಾತಾವರಣವೇ ಬದಲಾಗಿದೆ. ನಗರದಲ್ಲಿ ಬಲವಾದ ಪೋಲಿಸ್ ಕಾವಲು ತಿರುಗುತ್ತಿತ್ತು. ನಗರದಲ್ಲಿ ನಾಲ್ಕಾರು ಜನರು ಕೂಡಿ ತಿರುಗುತ್ತಿರಲಿಲ್ಲ. ನಗರವೆಲ್ಲ ಬಿಕೋ ಎನ್ನುತ್ತಿತ್ತು. ನಗರದಲ್ಲಿ ಶಾಲೆಕಾಲೇಜುಗಳಷ್ಟೇ ನಡೆಯುತ್ತಿದ್ದವು. ಅವುಗಳ ಜೊತೆಗೆ ಸರಕಾರಿ ಸಂಸ್ಥೆಗಳು ಪ್ರಾರಂಭವಾಗಿದ್ದು, ನಗರದಲ್ಲಿ ಜನರೇ ಇಲ್ಲವೇನೋ ಎಂದು ಭಾಸವಾಗುತ್ತಿತ್ತು. ಹೊಂಬೆಳಕು ಪತ್ರಿಕೆಯ ಮುದ್ರಣಾಲಯದ ಉದ್ಘಾಟನಾ ಸಮಾರಂಭವನ್ನು ಮತ್ತೆರಡುವಾರದ ವರೆಗೆ ಮುಂದೆ ಹಾಕಿದರು. ಆನಂದನ ತಂದೆಯು ಬಂದು ನಾಗನಗೌಡರಿಗೆ ಧೈರ್ಯ-ವನ್ನು ಹೇಳಿ ಹೋಗುತ್ತಿದ್ದರು ಸ್ವಲ್ಪದಿನಗಳಾದ ಮೇಲೆ ಪೋಲಿಸರು ನಿಜವಾದ ರಾಮುಲುನನ್ನು ಕರೆದು ತಂದು ಮಧುಕರನಿಗೆ ಒಪ್ಪಿಸುವರು. ನಂತರ ಪೋಲಿಸರಿಂದ ನಾಗನಗೌಡರಿಗೆ ಕರೆಬರುವನು. ನಾಗನಗೌಡರು

ಹೇಗಾದರೂ ಮಾಡಿ ನಾನು ಈ ಊರಲ್ಲಿರಬಾರದು, ನಾನು ಮಾಡಿದ ತಪ್ಪಿಗೆ ಸರಿಯಾದ ಶಿಕ್ಷೆಯನ್ನು ಅನುಭವಿಸಬೇಕು ಎಂಬ ಭಾವನೆ ಮನದಲ್ಲಿ ಸೇರಿಕೊಂಡಿತ್ತು. ನಾಗನಗೌಡರು ಮಾಡಿದ ಅಪರಾಧಗಳನ್ನು ಹೃದಯಪೂರ್ವಕವಾಗಿ ಒಪ್ಪಿಕೊಂಡು, ಅತಿ ಸಂತೋಷದಿಂದ ನಾನು ಮಾಡಿದ ಈ ಹೀನ ಕೆಲಸಗಳಿಗೆ ಸಾಯುವವರೆಗೂ ಜೈಲುವಾಸವಾಗಬೇಕು. ಆದರೆ ನೀವು ನಾಲ್ಕುವರ್ಷ ಶಿಕ್ಷೆವಿಧಿಸಿದ್ದೀರಿ, ಅದನ್ನೇ ನಾನು ಮನಃಪೂರ್ವಕವಾಗಿ ಒಪ್ಪುವೆನು ಎಂದು ನುಡಿದು, ಶಾಂತಾ ನಿನಗೆ ತಕ್ಕ ಗಂಡನಾಗಲಿಲ್ಲ, ದಯವಿಟ್ಟು ನನ್ನನ್ನು ಕ್ಷಮಿಸು ಎಂದು ಗೌಡರು ನುಡಿದಾಗ, ಹಾಗೆಲ್ಲ ಹೇಳಬೇಡಿಂದ್ರಿ. ಜನ್ಮ ಜನ್ಮಾಂತರ-ದಲ್ಲಿಯೂ ನೀವೇ ನನ್ನ ಪತಿಯಾಗಬೇಕು. ನೀವು ಆದಷ್ಟು ಬೇಗ ಹೊಸಮನುಷ್ಯರಾಗಿ ಬನ್ನಿ ಎಂದು ಗೌಡರ ಪಾದವನ್ನು ಮುಟ್ಟಿ ನಮಸ್ಕರಿಸುವಳು. ಗೌಡರು ಆನಂದದಿಂದ ಆಕೆಯನ್ನು ತಬ್ಬಿಕೊಂಡು ನಾನು ಮರಳಿ ಬರುವದಿಲ್ಲ ಶಾಂತಾ, ಕಮಲಳ ಯೋಗಕ್ಷೇಮ ನಿನ್ನದು, ಅವಳ ಮನಸ್ಸಿನ ಹಾಗೇ ಹೊಂದಿಕೊಂಡುಹೋಗು, ನಿನಗೆ ಎಲ್ಲವೂ ಅವಳೇ ಎಂದು ನುಡಿದಾಗ, ಗೌಡರ ಕಣ್ಣಲ್ಲಿ ನೀರು ಉದುರುವದು. ಕಮಲಳನ್ನು ಕರೆದು, ಕಮಲಾ ಇಂದು ನಾನು ಬಲು ಸಂತೋಷದಿಂದ ಇರುವೆನಮ್ಮ. ನಾನು ಮತ್ತೆ ಬರುವ ಹಾಗಿಲ್ಲ. ನಿನ್ನ ತಾಯಿಯ ಸಮಸ್ತ ಹೊಣೆಯನ್ನು ಈಗಾಗಲೇ ಹೊತ್ತಿದ್ದಿಯಾ, ಆದರ ಬಗ್ಗೆ ನನಗೆ ಯಾವುದೇ ತರಹದ ಚಿಂತೆಯಿಲ್ಲ, ನಾನು ಸುಖವಾಗಿ ಜೈಲನ್ನು ಅನುಭವಿಸುವೆನಮ್ಮ ಎಂದು ಹೇಳಿ, ಸಾಹುಕಾರರೇ, ಮಧುಕರಾ, ಇವರ ಮೇಲೆ ನಿಗಾಯಿರಲಿ ಎಂದು ಹೇಳಿ ಪೋಲಿಸ್‌ಕಾರನ್ನು ಹತ್ತಿ ಎಲ್ಲರಿಗೂ ನನ್ನ ಕೊನೆಯ ನಮಸ್ಕಾರಗಳು ಎಂದು ಹೇಳಿದಾಗ, ಗೌಡರನ್ನು ಹೊತ್ತಕಾರು ಎಲ್ಲರನ್ನು ದೂರಸರಿಸಿ ಹೋಯಿತು.

೪೬

ಶಾಂತಮ್ಮನವರು ಮತ್ತೆ ಹಾಸಿಗೆಯನ್ನು ಹಿಡಿದಾಗ, ಎಲ್ಲರೂ ಬಂದು ಧೈರ್ಯವನ್ನು ಹೇಳಿಹೋಗುತ್ತಿದ್ದರು. ಅಮ್ಮಾ ಅಪ್ಪಾಜಿ

ಮೊದಲಿನ ಹಾಗೆ ಒಳ್ಳೆಯ ಮನಸ್ಸುಳ್ಳವರಾಗಿ ಬರತಾರೆ ನೀನು ಬಹಳ ಧೈರ್ಯದಿಂದ ಇರಬೇಕು, ಎಂದು ಕಮಲ ಧೈರ್ಯವನ್ನು ಹೇಳುತ್ತಿದ್ದಳು. ಅಲ್ಲದೆ ರಾಮು, ಮಧುಕರ ಸಹ ದಿನಕ್ಕೊಮ್ಮೆ-ಯಾದರೂ ಬಂದು ಸಮಾಧಾನ, ಧೈರ್ಯವನ್ನು ಹೇಳಿ ಹೋಗುತ್ತಿದ್ದರು. ಭಾಗ್ಯ ಸಹ ಬಂದು ಹೋಗುತ್ತಿದ್ದಳು ಎಲ್ಲರ ಈ ಧೈರ್ಯದ ಮಾತುಗಳನ್ನು ಕೇಳಿ ಶಾಂತಮ್ಮನವರು ಗುಣಮುಖರಾದರು

ನಾಗನಗೌಡರು ತಮ್ಮ ಎರಡು ವರ್ಷದ ಜೈಲು ವಾಸದಲ್ಲಿ ಸಂಪೂರ್ಣ ಬದಲಾದರು. ಜೈಲ ಅಧಿಕಾರಿಗಳ ಪ್ರೀತಿಗೆ ಪಾತ್ರರಾದರು. ಗೌಡರನ್ನು ಕಾಣಲು ಹಾಗೂ ಅವರನ್ನು ಜಾಮೀನಮೇಲೆ ಬಿಡಿಸಿಕೊಂಡು ಹೋಗಲು ರಾಜಕೀಯ ವ್ಯಕ್ತಿಗಳು ಪ್ರಯತ್ನಪಟ್ಟಾಗ, ಅದನ್ನು ಗೌಡರು ನಿರಾಕರಿಸಿದರು. ಮಂತ್ರಿಗಳೇ ಇಲ್ಲಿಯವರೆಗೆ ನಾನೊಬ್ಬ ಮಾನವರೂಪದ ದಾನವನಾಗಿದ್ದೆ, ಈಗ ನನ್ನ ತಪ್ಪಿನ ಅರಿವು ಬಂದಿದೆ, ನಾನೊಬ್ಬ ಮನುಷ್ಯನೆಂಬುದನ್ನು ನಾನೇ ಖಚಿತಮಾಡಿಕೊಳ್ಳಬೇಕಾಗಿದೆ, ದಯವಿಟ್ಟು ನನ್ನಷ್ಟಕ್ಕೆ ನನ್ನನ್ನು ಬಿಟ್ಟುಬಿಡಿರೆಂದು ಕೈಮುಗಿದು ಕೇಳಿಕೊಂಡಾಗ, ಮಂತ್ರಿಗಳು ಸುಮ್ಮನಿರಬೇಕಾಯಿತು. ಅಂದು ಕಮಲಳು ಬಂದು ಅಪ್ಪಾ ನಮ್ಮ ಬಂಗಲೆಯನ್ನೆಲ್ಲ ನಾಶಮಾಡಿ ಅಲ್ಲಿ ಸಾಮಾನ್ಯ ಮಟ್ಟದ ಮನೆಗಳನ್ನು ಕಟ್ಟಿಸಿದ್ದೀನಿ. ಆದರಲ್ಲಿ ನಮಗೊಂದನ್ನು ಇಟ್ಟುಕೊಂಡು ತಾಯಿಯ ಹೇಳಿಕೆಯಂತೆ ಒಂದು ದೇವಸ್ಥಾನವನ್ನು ಕಟ್ಟಿಸಿ, ಉಳಿದ ಮನೆಗಳನ್ನು ನಮ್ಮ ಮಿಲ್ಲಿನ ಕೆಲಸಗಾರರಿಗೆ ಹಂಚಿದೀನಿ. ನಮ್ಮ ಹೊಲಗಳನ್ನು ಹೊಲವಿಲ್ಲದ ಬಡವರಿಗೆ ಹಂಚಿದೆ. ಅಲ್ಲದೆ ಗಿರವಿ ಇಟ್ಟಿದ್ದ ಸಾಮಾನುಗಳನ್ನು ಕೇಳಲು ಬಂದರು, ಅವುಗಳನ್ನು ಅವರವರ ಹೆಸರಿನಂತೆ ತಲುಪಿಸಿರುವೆ. ಕಾರುಗಳನ್ನು ಹೊಂಬೆಳಕು ಪತ್ರಿಕೆಗೆ ದೇಣಿಗೆ ಕೊಟ್ಟಿರುವೆ. ನಾನು ಕೂಡಾ ಮಿಲ್ಲಿನಲ್ಲಿ ವಿದ್ಯೆಗೆ ತಕ್ಕಂಥಹ ಕಾರಕೂನಳಾಗಿ ದುಡಿತಿದ್ದೀನಿ, ತಿಂಗಳ ಸಂಬಳ ತಗೊತೀನಿ. ಈ ವರ್ಷ ಬಂದ ಲಾಭದಲ್ಲಿ ಎಲ್ಲರಿಗೂ ಹಂಚಿದೆ. ಎಂದು ಹೇಳಿದಾಗ, ಗೌಡರ ಮನಸ್ಸು ಆನಂದದಿಂದ ಕುಣಿದಾಡಿತು. ನಿನ್ನ ಸಂತೋಷವೇ ನನ್ನ ಸಂತೋಷವಮ್ಮ ಎಂದು ಹೇಳಿ, ಮಗಳನ್ನು ಹೆಂಡತಿಯನ್ನು ಬೀಳ್ಕೊಟ್ಟಿದ್ದರು.

ನಗರದಲ್ಲಿ ಹೊಂಬೆಳಕಿನ ಬೆಳಕು ಮತ್ತಷ್ಟು ಪ್ರಕಾಶಮಾನವಾಗಿ ಪ್ರಜ್ವಲಿಸಿತು. ನಗರದ ಯುವಶಕ್ತಿಯ( ರಾಮು, ಕಮಲ, ಭಾಗ್ಯರ) ಮಹತ್ಕಾರ್ಯವನ್ನು ನಾಡೇ ಹೊಗಳಿತು. ತಮ್ಮೆಲ್ಲ ಆಸ್ತಿಪಾಸ್ತಿಗಳನ್ನು ದಾನಮಾಡಿ ತಾವು ಕೂಡಾ ಜನಸಾಮಾನ್ಯರಂತೆ ದುಡಿದು ತಮ್ಮ ಜೀವನವನ್ನು ಸಾಗಿಸುತ್ತಿದ್ದರು ಅಲ್ಲದೆ ಆನಂದನ ತಂದೆಯು ಕೂಡಾ ತಮ್ಮೆಲ್ಲ ಆಸ್ತಿಯನ್ನು ಬಡವರಿಗೆ ಹಂಚಿ ನಗರದಲ್ಲಿಯೇ ಒಂದು ಚಿಕ್ಕಮನೆ ಕಟ್ಟಿಸಿಕೊಂಡು ಜೀವನವನ್ನು ಸಾಗಿಸಹತ್ತಿದರು. ಅಲ್ಲದೆ ಸರಕಾರದ ಅನುಮತಿಯನ್ನು ಪಡೆದು ನಗರದ ಸುತ್ತಮುತ್ತಲೂ ಮನೆಗಳನ್ನು ನಿರ್ಮಿಸಿ ಬಡವರಿಗೆಲ್ಲ ಹಂಚಿದರು. ನಗರದಲ್ಲಿ ಚಿಕ್ಕ-ಉಧ್ಯಮಗಳನ್ನು ನಿರ್ಮಿಸುವಂತೆ ಸರಕಾರಕ್ಕೆ ಒತ್ತಾಯಮಾಡಿ, ನಗರದ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಿದರು. ಅಲ್ಲದೆ ಮಹಿಳೆಯರಿಗೂ ಸಹ ಮನೆಗೆಲಸಗಳನ್ನು ಮಾಡಿ ಕಾಲಹರಣ ಮಾಡಬಾರದೆಂದು ತಿಳಿದು, ಅಲ್ಲಲ್ಲಿ ಕೇರಿಗೊಂದೊಂದು ಚಿಕ್ಕ ಉಧ್ಯಮಗಳನ್ನು ಸ್ಥಾಪಿಸಿ, ಅಲ್ಲಿ ನೂಲಿನರಾಟೆ, ಹೊಲಿಗೆಯಂತ್ರಗಳಲ್ಲದೆ, ಚಿಕ್ಕ ಪುಟ್ಟ ಹೆಣಿಕೆಯ ಮಷಿನ್‌ಗಳನ್ನು ತಂದು ಇಟ್ಟಿದ್ದರು. ಹೀಗಾಗಿ ನಗರದಲ್ಲಿ ಕಾಂತಾರಾಜನು ನಗರದ ಅಧ್ಯಕ್ಷನಾಗಿ ನಗರದ ಆರ್ಥಿಕ ಸ್ಥಿತಿಯನ್ನು ಸಂಪೂರ್ಣ ಬದಲಾಯಿಸಿದನು. ಮಧುಕರನಿಗೆ ಬಂದ ಪತ್ರವನ್ನು ಓದುತ್ತ ಕುಳಿತಿದ್ದನು. ಆ ಪತ್ರವನ್ನು ರಾಮು ಹಾಗೂ ಕಾಂತಾರಾಜ ಸಹ ಓದಿದರು. ಗೌಡರ ಈ ಮನದ ಪರಿವರ್ತನೆಯನ್ನು ಕಂಡು ಎಲ್ಲರಿಗೂ ಸಂತೋಷವಾಯ್ತು. ಮಾನವತಾವಾದವನ್ನು ಜಗಕೆಲ್ಲ ಸಾರಿಹೇಳಿ, ರಾಕ್ಷಸರೂಪದ ಇಂದಿನ ಈ ಸಮಾಜದ ಮಾನವನನ್ನು ಪರಿವರ್ತಿಸಿ ಮಾನವರೂಪದ ಮಾನವೀಯತೆಯನ್ನು ಜಗಕೆಲ್ಲ ಸಾರಲು ಹಗಲಿರುಳು ದುಡಿಯುವ ನಿಮಗೆಲ್ಲರಿಗೂ ನನ್ನ ನಮನಗಳು. ಮಾನವೀಯತೆಯ ಮೂಲಮಂತ್ರವನ್ನೇ ಅರಿಯದ ನಾನು, ಅಂದು ನನ್ನ ಮನೆಗೆ ನೀನು ಬಂದಾಗ ಸವಾಲೊಂದನ್ನು ಹಾಕಿ, ನನ್ನ ಹೊಲಸು ಬಾಯಿಂದ ಏನೇನೋ ಅಂದು ಅವಮಾನ ಮಾಡಿದ್ದೆ. ಅದಕ್ಕಾಗಿ ಕ್ಷಮೆಯನ್ನು ಕೇಳುವೆನು. ನೀನೊರ್ವ ಅಸಾಧಾರಣ ಮನುಷ್ಯ. ನಿನ್ನ ಬಾಳನ್ನು ಬೆಳಗಬೇಕಾದ ಮಂಜುಳಾಳನ್ನು ಕೊಲೆಗೈದೆ, ಅದರ ತಪ್ಪಿಗಾಗಿ ನಿನ್ನಲ್ಲಿ ಒಂದು ಅರಿಕೆ

ಮಾಡಿಕೊಳ್ಳುವೆನು. ನೀನು ಮನಃಪೂರ್ವಕವಾಗಿ ಒಪ್ಪಿದರೆ, ಕಮಲಳನ್ನು ನಿನ್ನ ಬಾಳಸಂಗಾತಿಯಾಗಿ ಸ್ವೀಕರಿಸು, ಅವಳ ಬಹುದಿನಗಳ ಬಯಕೆ ಈಡೇರಲಿ, ಈ ವಿಷಯದಲ್ಲಿ ಯಾವುದೇ ತರಹದ ಒತ್ತಡವಿಲ್ಲ. ಇದು ನಿನ್ನ ಸ್ನೇಹಿತನ ಸಲಹೆಮಾತ್ರ. ನಿನ್ನ ವಯಕ್ತಿಕ ವಿಷಯದಲ್ಲಿ ಕೈಹಾಕಿದ್ದಕ್ಕೆ ಕ್ಷಮೆಯಿರಲಿ, ಕೆಂಪುನಮನಗಳೊಂದಿಗೆ ನಾಗನಗೌಡರು ಪತ್ರವನ್ನು ಬರೆದು ಮುಗಿಸಿದ್ದರು. ಕಮಲಳನ್ನು ಈ ವಿಚಾರವಾಗಿ ಕೇಳಲು ಸಂತೋಷದಿಂದ ಒಪ್ಪಿಗೆಯನ್ನು ನೀಡಿದಳು. ನಾಗನಗೌಡರು ತಮ್ಮ ಜೈಲುವಾಸವನ್ನು ಮುಗಿಸಿ ಬಂದ ಎರಡು ದಿನದಲ್ಲಿ ಮದುವೆಯೆಂದು ತೀರ್ಮಾನಿಸಿದರು. ರಾಮು ಭಾಗ್ಯಳ ಹಾಗೂ ಮಧು-ಕಮಲರ ಮದುವೆ ನಿಶ್ಚಯ ಮಾಡಿದ್ದರು.

ನಾಗನಗೌಡರು ಜೈಲುವಾಸವನ್ನು ಮುಗಿಸಿ ಹೊರಬಂದರು. ಅವರನ್ನು ಮರುದಿನ ಬಿಡುಗಡೆ ಮಾಡಬೇಕಾಗಿತ್ತು. ಆದರೆ ಅವರನ್ನು ಇಂದೇ ಬಿಟ್ಟಿದ್ದಕ್ಕಾಗಿ ಗೌಡರಿಗೆ ಬಹಳ ಸಂತೋಷವಾಯಿತು. ಗೌಡರನ್ನು ಕರೆಯಲು ಹೋದ ಆನಂದನ ತಂದೆ, ನಿರಾಶೆಯಿಂದ ನಗರಕ್ಕೆ ಆಗಮಿಸಿದ್ದರು. ಮದುವೆಯ ಎಲ್ಲ ಕಾರ್ಯಗಳು ಭರದಿಂದ ಸಾಗಿವೆ. ಮದುವೆಗಂತೂ ಬಂದೇಬರುವರೆಂದು ಎಲ್ಲರೂ ಖಾತ್ರಿಮಾಡಿ-ಕೊಂಡರು. ನಗರಕ್ಕೆ ಬಂದ ಗೌಡರು ನಗರದಲ್ಲೆಲ್ಲ ಸುತ್ತಾಡಿದರು, ಸನ್ಯಾಸಿವೇಶದ ಗೌಡರು, ಜೈಲಿಗೆ ಹೋಗುವಾಗಿನ ಶರೀರ ಈಗಿರದೆ ಬಹಳ ಕ್ಷೀಣವಾಗಿದ್ದರು. ನಗರವನ್ನೆಲ್ಲ ಸುತ್ತಿನೋಡಿದರು. ಹೊಂಬೆಳಕು ಮುದ್ರಣಾಲಯದ ಮುಂದೆ ತಮ್ಮದೊಂದು ಕಾರು ನಿಂತಿತ್ತು. ನಗರದ ರಸ್ತೆಗಳನ್ನು ಅಲಿಸಿದರು. ರಸ್ತೆಯ ಅಕ್ಕ ಪಕ್ಕದಲ್ಲಿ ಗಿಡಗಳನ್ನು ನೆಡೆಸಿದ್ದರು. ಪ್ರತಿಯೊಂದು ಸರ್ಕಲ್ಲಿನಲ್ಲಿಯ ಮೂರ್ತಿಗಳನ್ನು ನೋಡಿದರು. ಭಾಗ್ಯಳ ಆಸ್ಪತ್ರೆ ನೋಡಿದರು. ತಮ್ಮ ಬಂಗಲೆಯನ್ನು ನೋಡಿದರು. ಬಂಗಲೆಯ ದ್ವಾರಬಾಗಲವಿದ್ದಲ್ಲಿ .ಬಸವಣ್ಣನವರ ದೇವ-ಸ್ಥಾನವಿದ್ದು, ಕಾಯಕವೇ ಕೈಲಾಸವೆಂದು ಬರೆದದ್ದು ಓದಿದರು. ಅದರಿಂದ ಅವರ ಮಡದಿಯು ಹೋದದ್ದನ್ನು ಕಂಡು ದೀರ್ಘವಾದ ಉಸಿರನ್ನು ಎಳೆದರು. ಅಲ್ಲಿ ತಳಿರು ತೋರಣಗಳಿಂದ ಸಿಂಗರಿಸಿದ್ದನ್ನು

ಕೆಂಡು ಕಮಲಳ ಮದುವೆಯು ಇಲ್ಲಿ ಇರಬೇಕೆಂದು ವಿಚಾರಮಾಡಿದರು. ಅಷ್ಟರಲ್ಲಿ ಕತ್ತಲಾಗುತ್ತ ಬಂದಿತು. ಊರಹೊರಗಿನ ಸಂಗಮನಾಥನ ದೇವಸ್ಥಾನಕ್ಕೆ ಮಲಗಲು ಹೋದರು.

ಮಧುಕರನ ಹರಿತವಾದ ಲೇಖನಗಳಿಂದ ಜನರು ಬದಲಾವಣೆ ಹೊಂದಿದರು. ಜನರನ್ನು ಜಾಗ್ರತಿಗೊಳಿಸುತ್ತ, ದಿನೇ ದಿನೇ ತನ್ನ ಪ್ರತಿಭೆಯನ್ನು ಪ್ರಜ್ವಲಮಾನವಾಗಿ ಪ್ರಕಾಶಿಸುತ್ತ, ಜನರ ಮನದ ದಾಂದೀಪವಾಗಿ, ಬಡಜೀವಿಗಳ, ಶ್ರಮಿಕರ ಬಾಳಿನಬೆಳಕಾಗಿ, ದುಷ್ಟಶಕ್ತಿಗಳನ್ನು ನಾಶಮಾಡುತ್ತ ಮುನ್ನಡೆದಿದೆ. ಸಮಾನತೆಯೆಂಬ ಮಾನವತಾವಾದವನ್ನು ಅನುಸರಿಸುತ್ತ ಸತ್ಯದ ವಿಚಾರದ ಹಾದಿಯಲ್ಲಿ ಮಾನವ ಹೃದಯವನ್ನು ಗೆಲ್ಲುತ್ತ ಜನರ ಹೊಸ ಆಶೆಯ ಕುಡಿಯಾಗಿ ಬೆಳೆಯತೊಡಗಿದೆ.

ರಾಮು ಸಂಘಟನೆಯಲ್ಲಿ ಸಾಕಷ್ಟು ಹೆಸರನ್ನು ಗಳಿಸಿದ್ದನು. ಈತನಿಗೆ ಕಾಂತರಾಜ, ಶಂಕರ ಹಾಗೂ ನಾಗೇಶರು ಸಹಾಯಕರಾಗಿ ದುಡಿಯುತ್ತಿದ್ದರು. ಕಾಂತರಾಜನು ನಗರಸಭೆಯ ಅಧ್ಯಕ್ಷನಾಗಿದ್ದು, ನಗರದ ಉನ್ನತಿಗಾಗಿ ಶಕ್ತಿಮೀರಿ ದುಡಿಯುತ್ತಿದ್ದನು. ಹದಿನೈದು ವರ್ಷಗಳಲ್ಲಿ ನಾವು ಮಾಡದ ಈ ತರಹದ ಅನೇಕ ಘನಕಾರ್ಯಗಳನ್ನು ಕೇವಲ ನಾಲ್ಕು ವರ್ಷದಲ್ಲಿ ಮಾಡಿತೋರಿಸಿದ್ದಾರೆ. ಮಾನವನ ಮನಸ್ಸು ಒಂದು ಫಲವತ್ತಾದ ಭೂಮಿಯಿದ್ದಂತೆ, ಅದರಲ್ಲಿ ನಾವು ಏನನ್ನಾದರೂ ಬೆಳೆಯಬಹುದು. ನಾವು ಸರಿಯಾಗಿ ಫಲಕೊಡುವ ಒಳ್ಳೆಯ ಬೀಜಗಳನ್ನು ಬಿತ್ತಿದರೆ, ಒಳ್ಳೆಯ ಫಲ ಬರುವದು. ಕೆಟ್ಟಬೀಜಗಳನ್ನು ಬಿತ್ತಿದರೆ, ಕೆಟ್ಟಫಲಗಳು ಬರುತ್ತವೆ. ಇಂದಿನ ಈ ಯುವಶಕ್ತಿಗೆ ಈ ಗೌರವ ಬರಲು ಸಂಗಪ್ಪಮಾಸ್ತರರಂಥಹ ಮಹಾನ್‌ಮೇದಾವಿಗಳೇ ಕಾರಣರು. ಎಂದು ಗೌಡರು ರಾತ್ರಿಯಿಡೀ ವಿಚಾರ ಮಾಡಿದರು.

ಶಾಂತಮ್ಮನವರ ಆಶೆಯಂತೆ ಸಂಗಮನಾಥನ ದೇವಾಲಯದಲ್ಲಿ ಮದುವೆಯನ್ನು ಏರ್ಪಡಿಸಿದ್ದರು. ಮದುವೆಯ ಮಂಟಪದಲ್ಲಿ ಮಧುಕರ-ಕಮಲ, ರಾಮು-ಭಾಗ್ಯ ಕುಳಿತಿದ್ದಾರೆ. ಅತೀ ಸರಳವಾದ

ಮದುವೆ. ಯಾವುದೇ ತರಹದ ಆಡಂಬರವಿಲ್ಲ. ಬಂದವರಿಗೆಲ್ಲ ಊಟದ ವ್ಯವಸ್ಥೆಮಾತ್ರ ಬಹಳ ಚೆನ್ನಾಗಿ ಏರ್ಪಡಿಸಿದ್ದರು. ಒಂದು ತರಹದ ಸಿಹಿ, ಅನ್ನಸಾರು, ಉಪ್ಪಿನಕಾಯಿ ಇವು ಊಟದ ವ್ಯವಸ್ಥೆಗಳು. ಗೌಡರು ದೂರದಲ್ಲಿ ನಿಂತು ಮದುವೆಯ ಮಂಟಪದಲ್ಲಿದ್ದ ನಾಲ್ವರಿಗೂ ಅಕ್ಷತೆಹಾಕಿದಾಗ, ಗೌಡರ ಕಣ್ಣಲ್ಲಿಂದ ನೀರು ತಾನಾಗಿಯೇ ಹೊರ ಸೂಸಿದವು. ಯಾರಿಗೂ ತೋರಗೊಡದೆ ನೀರನ್ನು ಒರೆಯಿಸಿಕೊಂಡರು. ಕೋಟ್ಯಾಂತರ ರೂಪಾಯಿ ಆಸ್ತಿವಂತರ ಏಕೈಕಪುತ್ರಿಯ ಮದುವೆ ಇಷ್ಟೊಂದು ಸರಳವೇ, ಎಂದು ಉದ್ಗಾರವನ್ನು ತೆಗೆದು, ಹೌದು ಆಡಂಬರವೇಕೆಬೇಕು, ಆಡಂಬರದ ಖರ್ಚಿನಲ್ಲಿಯೇ ಇನ್ನೂ ನೂರಾರು ಬಡವರಿಗೆ ಊಟಹಾಕಿಸಬಹುದಲ್ಲ ಎಂದು ವಿಚಾರಮಾಡಿ, ಮದುವೆಯ ಊಟವನ್ನು ಮಾಡಿಬಂದು, ಒಂದು ಕವರನ್ನು ಮಧುಕರ ಹಾಗೂ ರಾಮುಗೆ ಕೊಡಲು ಹೇಳಿ ಅಲ್ಲಿಂದ ಹೊರಟು ಹೋದರು.

ಆ ಕವರಿನಲ್ಲಿಯ ಹಾಳೆಯಲ್ಲಿ ಹೀಗೆ ಬರೆದಿತ್ತು.

"ನವದಂಪತಿಗಳಿಗೆ, ನವಜೀವನದ ದಾರಿ ಸುಗಮವಾಗಿ, ಬಾಳಿನಲ್ಲಿ ಸುಖ-ಸಂತೋಷ ನಿಮ್ಮ ಪಾಲಿಗಿರಲಿ. ವರುಷ ತುಂಬುವದರೊಳಗಾಗಿ ಚಂದ್ರಶೇಖರ ಆಜಾದ್, ಬಗತ್‌ಸಿಂಗ್, ಸಂಗಪ್ಪಮಾಸ್ತರ, ಗೋಪಾಲ ನಂತಹ ನಿಷ್ಠಾವಂತರನ್ನು ಹೆತ್ತು. ನಮ್ಮ ಮೂಲ ವಿಷಬೀಜದ ವರ್ಗಸಮಸ್ಯೆಯನ್ನು ಬೇರುಸಮೇತ ಕಿತ್ತೊಗೆದು, ನವಸಮಾಜವನ್ನು ಉದಯಿಸಿರಿ. ಯುವಶಕ್ತಿ ಬೆಳೆದು ಬಲಗೊಳ್ಳಲಿ: ಐಕ್ಯತೆ ಮೂಡಿ ಬರಲಿ! ನವಸಮಾಜ ಉದಯಿಸಲಿ! ಸಮಾಜವಾದ ಮೊಳಗಲಿ!"

ಕೆಂಪುನಮನಗಳೊಂದಿಗೆ ನಾಗನಗೌಡರು

— ಸಮಾಪ್ತಿ —

ವಿಜಾಪುರ ಜಿಲ್ಲೆಯ ಮನಗೋಳಿ ಗ್ರಾಮದ ಶ್ರೀ ಬಿ. ಜಿ. ಯರನಾಳ ಅವರು ವೃತ್ತಿಯಿಂದ ಯಂತ್ರಗಳ ಮಧ್ಯೆ ದುಡಿಯುವ ಕಾರ್ಮಿಕರು. ಓದಿದ್ದು ಪಿ. ಯು. ಸಿ. ವರೆಗೆ, ಆದರೂ ಅವರಿಗೆ ಸಾಹಿತ್ಯದ ಬಗ್ಗೆ ಪ್ರೀತಿಯಿದೆ; ಬರೆಯಬೇಕೆನ್ನುವ ಆಸಕ್ತಿಯಿದೆ. ಅದರ ದ್ಯೋತಕನೇ ಈ ಕಿರುಕಾದಂಬರಿ ಹೊಂಬೆಳಕು.

ಯಾವುದೇ ಒಂದು ಬರವಣಿಗೆಗೆ 'ವಸ್ತು'ವಿದ್ದ ಮಾತ್ರಕ್ಕೆ ಸಾಲದು, ಅದರ ಅಭಿವ್ಯಕ್ತಿಗೆ ಬಳಸುವ ಭಾಷೆ ಸಾರೋದ್ಧಾರಕ ಶಕ್ತಿ ಮತ್ತು ಭಾಷೆಯ ಆಂತರಿಕ ಶಿಸ್ತುಗಳಿಂದ ಕೂಡಿಕೊಂಡಾಗ ಅದು ಕೊಡುವ ಸುಖವೇ ಬೇರೆ. ಆ ಸುಖದ ಕೊರತೆಯನ್ನ ಶ್ರೀ ಯರನಾಳರ ಬರವಣಿಗೆಯಲ್ಲಿ ಕಾಣಬಹುದಾದ ಮುಖ್ಯ ಅಂಶವಾದರೂ, ಅವರಿಗೆ ಇಲ್ಲಿಯ ವ್ಯವಸ್ಥೆಯ ಬಗ್ಗೆ ಅಸಹ್ಯ, ರೋಷ ಎಲ್ಲವೂ ಇದೆ, ಅಷ್ಟೇ ಈ ಕೊಳಕು ವ್ಯವಸ್ಥೆಯನ್ನು ಒದ್ದೋಡಿಸ ಬೇಕಾದ ಜರೂರಿನ ಕ್ರಿಯೆಯ ಬಗ್ಗೆ ಎಚ್ಚರವೂ ಇದೆ. ಅದನ್ನೆ ತಮ್ಮ ಕಿರುಕಾದಂಬರಿಯಲ್ಲಿ ದಾಖಲಿ ಸಿದ್ದಾರೆ. ಸ್ನೇಹಜೀವಿಯಾದ ಯರನಾಳರು ಸಮಾಜ ವಾದದಿಂದ ಪ್ರೇರಣೆ ಪಡೆದವರು. ತಮ್ಮ ಪರಿಸರದ ಬದುಕಿನ ನಾನಾಮುಖದ ಅನುಭವಗಳೊಡನೆ ಸಾಹಿತ್ಯಕ್ಷೇತ್ರದಲ್ಲಿ ಬೆಳೆದು ಮುಂಬರುವ ದಿನಗಳಲ್ಲಿ ಇನ್ನೂ ಉತ್ತಮ ಕೃತಿಗಳನ್ನು ಕೊಡಲಿ ಎಂದು ಆಶಿಸುತ್ತ;

(ಮುನ್ನುಡಿಯಿಂದ)